## ' ಸಿದ್ಧಗಂಗಾ ' ಚಿರಾಯುವಾಗಲೆಂದು ಹರಸಿ ಹಾರೈಸಿರುವ ಆಜೀವ ಸದಸ್ಯರಬಳಗ.

ಸರ್ವಶ್ರೀ :-

1286 ಸಿ.ವಿ. ಮಮದಾಪುರ, ಅ||ಎ|| ಇಂಜಿನಿಯರ್, ಹುಡ್ಕೊಕಾಲೋನಿ, ವಾಟರ್ ಟ್ಯಾಂಕ್ ಬಳಿ, ಬಾಗಲಕೋಟೆ ರಸ್ತೆ, ಬಿಜಾಪುರ.

1287 ಎಸ್.ಎಸ್. ಕಲ್ಲಪ್ಪಗೌಡರ, ತೊಳಗಿ ಅಂಚೆ, ಖಾನಾಪುರ ತಾ|| ಬೆಳಗಾಂ ಜಿಲ್ಲಾ.

1288 ಬಿ. ಪ್ರಭಾಶಂಖರ್, ಎ|| ಇಂಜಿನಿಯರ್, ಎಂ.ಎಲ್.ಟಿ ಸಿ.ಸಿ. ಡಿವಿಜನ್, ರಾಮದುರ್ಗ ಅಂಚೆ, ಬೆಳಗಾಂ ಜಿಲ್ಲಾ.

1289 ಸಿ. ವಿನಯ್ವೈವಾಡೇಕರ್, C/o ಬಾಲಕೃಷ್ಣಗೌಡ, ನಂ. 4185, (ಸುಬ್ರಹ್ಮಣ್ಯನಗರ) ರಾಜಾಜಿನಗರ, ಬೆಂಗಳೂರು-10

1290 ಶಿವಕುಮಾರ್, S/o ವಿಶ್ವನಾಥ ಅವಟಿ, R.T.O. ಮಾಡಲ್ ಹೈಸ್ಕೂಲ್ ಬಳಿ, ಕೆ, ಸಿ. ರಸ್ತೆ ಗದಗ ಅಂಚೆ.

1291 ಶ್ರೀಮತಿ ರುದ್ರಾಂಬ W/o ಶ್ರೀ ಎಂ. ಮಾದಯ್ಯ, ನಂ 2327 3 ನೇ ಮುಖ್ಯರಸ್ತೆ ಆರ್. ಪಿ. ಸಿ. ಬಡಾವಣೆ ವಿಜಯನಗರ, ಬೆಂಗಳೂರು-40

1292 ಚಂದ್ರಶೇಖರ್, ಮಾಲೀಕರು, ರತ್ನಾಪೆಟ್ಟಿ ಸ್ಟೋರ್ ನಂ. 16, 7 ನೇ ಕ್ರಾಸ್, ಮಲ್ಲೇಶ್ವರ ಬೆಂಗಳೂರು-3

1293 ಪರಮಶಿವಯ್ಯ, ಮೈಸೂರು ಬ್ಯಾಂಕ್ ಬಳಿ, ಅಂಬೇಡ್ಕರ್ ವೀಧಿ ರಸ್ತೆ, ನೆಲಮಂಗಲ ಬೆಂಗಳೂರು ಜಿಲ್ಲೆ

1294 ಶ್ರೀಮತಿ ಅನಸೂಯಮ್ಮ, ನಂ. 2308, ರೇಣುಕ ನಿಲಯ ಎಂ. ಸಿ. ಕಾಲೋನಿ, ಎಸ್. ಎಸ್. ಪುರಂ. ತುಮಕೂರು

1295 ಗಂಗಪ್ಪ, ನಂ. 509, 8 ನೇ ಮುಖ್ಯರಸ್ತೆ, 4 ನೇ ಕ್ರಾಸ್ ವಿಜಯನಗರ, ಬೆಂಗಳೂರು-40

# ಸಿದ್ಧಗಂಗಾ

ಸಂಪುಟ-೨೫ ಸಂಚಿಕೆ-೪ ಏಪ್ರಿಲ್, ೧೯೮೯

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಅರಿವಿನಾನಂದವಾದೆ ಹಿರಿಗುರುವುನೀನಾದೆ
ಅರಿವಿನರಿವೆಯ ಹೊದಿಸಿದೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಹೂವಾಗು ಹಣ್ಣಾಗು ಒಳ್ಳೆಫಲನೀನಾಗು
ಹಾವು ಹೂವಾದೀತು ಬಾಳಿಗೆ। ಎಂದ್ಹರಸಿದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ನುಡಿಯಲ್ಲಿ ನಡೆಯಲ್ಲಿ ಕೆಡದಿರುನೀನೆಂದು
ಒಡೆಯ ನೀನರುಹಿದೆ ಕೈಬಿಡದೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್. ವಿ. ವೀರಭದ್ರಯ್ಯ

## ಒಳ ಪುಟಗಳಲ್ಲಿ



## ಶ್ರೀವಾಣಿ

### ವ್ಯವಸಾಯ ಪರಿಶುದ್ಧ ಕಾಯಕ



ವ್ಯವಸಾಯವೆಂಬುದು ಪವಿತ್ರ ವೃತ್ತಿ. ಅದು ಅನ್ನ ಬ್ರಹ್ಮನ ಸೃಷ್ಟಿ ಮಾಡುವ ಪವಿತ್ರ ಉದ್ಯೋಗ. ವೇದೋಪನಿಷತ್ತುಗಳು ಸಾರಿರುವುದೇನು ? ನಿಷ್ಕ್ರಿಯಾಜೀವನವನ್ನಲ್ಲ. ಅವು ನಮಗೆ ದುಡಿಮೆಯ ಮಹತ್ವದ ಪಾಠವನ್ನೇಹೇಳುತ್ತವೆ ಕ್ರಿಯಾಶೀಲನಾಗದ ವ್ಯಕ್ತಿ "ಶರ. ದಶ್ಶತಂ" ಬಾಳಿದರೂ ಅದು ಅರ್ಥರಹಿತ, ಜೀವನದ ಸಾರ್ಥಕತೆಯನ್ನು ಪರಿಶುದ್ಧ ಕಾಯಕದಿಂದಲೇ ಪಡೆಯಬೇಕು. ನಮ್ಮ ಧರ್ಮಗ್ರಂಥಗಳು ಕಾಯಕ ರಹಿತ ಬಾಳಿಗೆ ಮಹತ್ವವನ್ನು ಕೊಟ್ಟೇಇಲ್ಲ. ಅಂಥಕಾರ್ಯಶೀಲ ರೈತನ ಬಗಗೆ ಪ್ರತಿಯೊಬ್ಬ ಇನ್ನಿತರ ಕಾಯಕದವರು ಅಪಾರ ಗೌರವವನ್ನು ತಾಳಬೇಕು. ನಾವು ಏನೆಲ್ಲವನ್ನು ಉತ್ಪಾದಿಸಬಹುದು. ಆದರೆ ಅನ್ನದ ಉತ್ಪಾದನೆ ಕುಂಠಿತವಾದಾಗ ಉಳಿದೆಲ್ಲ ಉತ್ಪಾದನೆಗಳಿಗೇನು ಬೆಲೆ ? ಸುಖಜೀವನದ ಅರ್ಥ ಬೇಸಾಯಗಾರನಿಗೆ ಮಾತ್ರ ಗೊತ್ತು. ಹಳ್ಳಿ ಭೋಗ ಜೀವನ ಕೇಳಿಲ್ಲ, ಅಧಿಕಾರ, ಸಂಪತ್ತು ಮತ್ತು ಭೋಗಜೀವನದ ದಾಹಗಳು. ಮಾನವನನ್ನು ದಾನವನನ್ನಾಗಿ ಮಾಡುವ ಪರಿಸ್ಥಿತಿ ಹಳ್ಳಿಗಳಲಿಲ್ಲ. ಪ್ರಾಚೀನ ಕಾಲದಲ್ಲಿ ಸೇವೆಯೇ ಅರ್ಥವ್ಯವಸ್ಥೆಯಾಗಿತ್ತು. ವಸ್ತುಗಳು ವಿನಿಮಯಕ್ಕೆ ಮಾಧ್ಯಮವಾಗಿದ್ದುವು. ಕಾರಣ ಗ್ರಾಮಜೀವನ ಆರ್ಥಿಕವಾಗಿ ಸ್ವಯಂ ಪರಿಪೂರ್ಣವಾಗಿತ್ತು. ಇಂದಿನ ಗ್ರಾಮಜೀವನ ಪ್ರಾಚೀನಧರ್ಮವನ್ನು ಮರೆಯದೆ ಕರ್ತವ್ಯ ಪ್ರಜ್ಞೆ, ಕ್ರಿಯಾಶೀಲತೆಯನ್ನು ಬೆಳೆಸಿಕೊಳ್ಳಬೇಕು. ರೈತರ ಸಂಘಟನೆ ಮಾಡಿ ಅವರ ಉದ್ಧಾರಕ್ಕೆ ಶ್ರಮಿಸುತ್ತಿರುವ ಸಂಸ್ಥೆಗಳು ರೂಪುಗೊಳ್ಳುತ್ತಿರುವುದು ತುಂಬಾ ಸಂತೋಷದ ವಿಚಾರ. ರೈತನ ದುಡಿಮೆಗೆ ಮಹತ್ವವಿತ್ತು ಅವನಿಗೆ ಅನುಕೂಲ ವಾತಾವರಣ ಕಲ್ಪಿಸುವುದು ಪ್ರಮುಖ ಅಂಶ. ಇದು ಯಾವ ರಾಜಕೀಯ ಹಾಗೂ ತತ್ವಗಳ ಜಿಜ್ಞಾಸೆಯಲ್ಲ. ಸ್ವಾತಂತ್ರ್ಯ ಬಂದು 42 ವರ್ಷಗಳಾದರೂ ರೈತನ ಪರಿಸ್ಥಿತಿ ಉತ್ತಮವಾಗಿಲ್ಲವೆ ? ಎಂಬ ಪ್ರಶ್ನೆಗೆ ಉತ್ತರ ದೊರಕುವುದು ಕಷ್ಟ. ಅವನ ಸಾಲದ ಮೊತ್ತ ಕಡಿಮೆಯಾಗಿಲ್ಲ. ಅಧಿಕವಾಗಿದೆ. ಅನೇಕರು ಬೆಳೆದ ಕಾಳನ್ನೆಲ್ಲಾ ಸಾಲಕ್ಕೆ ಕೊಟ್ಟು ಬರಿಗೈಯಿಂದ ಹೋಗವ ಪರಿಸ್ಥಿತಿಯೂ ಇದೆ. ಒಳ್ಳೆಯ ಭವಿಷ್ಯವಿಲ್ಲದೆ ಸಂಕಟಪರಿಸ್ಥಿತಿಯಲ್ಲಿರುವ ರೈತರ ಸಂಘಟನೆ ಇಂದು ತುಂಬಾ ಅಗತ್ಯ. ಇಲ್ಲಿ ಧರ್ಮವೆಂದರೆ ಆರ್ಥಿಕ, ರಾಜಕೀಯ, ಧಾರ್ಮಿಕ ಅಥವ ಆಧ್ಯಾತ್ಮಿಕ ಯಾವುದೇ ರಂಗವಾಗಿರಲಿ ಕೆಳಗೆ ಬಿದ್ದವನನ್ನು ಮೇಲಕ್ಕೆತ್ತುವುದೇ ಆಗಿದೆ, ಬೇರೆಯವರ ಸುಖದುಃಖಗಳಲ್ಲಿ ಭಾಗಿಯಾಗಿ ಮಾನವ ಕಲ್ಯಾಣವನ್ನು ಹಾರೈಸುವುದೇ ಧರ್ಮ, ಅವುಗಳನ್ನು ತೋರಿಕೆಗಾಗಿ ಆಚರಿಸುವುದಲ್ಲ, ಹೃದಯಪೂರ್ವಕವಾಗಿ ಮಾಡಬೇಕು. ಇದು ರಾಜಕೀಯ ಹಾಗು ಪಕ್ಷ, ಪ್ರತಿಪಕ್ಷಗಳ ಪ್ರಶ್ನೆಯಾಗಿಲ್ಲ. ರೈತನ ಉದ್ಧಾರಕ್ಕೆ ಅಗತ್ಯವಾದ ಕಾರ್ಯಕ್ರಮಗಳು ರೂಪುಗೊಂಡು ಸೂಕ್ತ ಪರಿಹಾರಗಳು ದೊರೆಯಲಿ. ರೈತನ ಬದುಕು ಹಸನಾಗಲಿ ರಾಜಕೀಯ ರಹಿತ ಪ್ರಾಮಾಣಿಕ ರೈತ ಸಂಘಟನೆಗಳು ಇಂದು ತುಂಬಾ ಅಗತ್ಯ.

## ಸಿದ್ಧಗಂಗಾ ಮಾಸ ಪತ್ರಿಕೆಯ ಸಲಹಾ ಮಂಡಳಿ

1 ಶ್ರೀ ಜಿ. ಪರಮೇಶ್ವರಪ್ಪನವರು ಪ್ರಾಚಾರ್ಯರು, ಎಸ್.ಐ ಟಿ, ತುಮಕೂರು.
2 ಶ್ರೀ ಎಂ. ವಿ. ಸಿದ್ಧಲಿಂಗಮೂರ್ತಿಯವರು ಪ್ರಾಚಾರ್ಯರು, ಸಿದ್ಧಗಂಗಾ ಶಿಕ್ಷಣ ಮಹಾವಿದ್ಯಾಲಯ, ತುಮಕೂರು.
3 ಶ್ರೀ ಹೆಚ್.ಬಿ ಗಂಗಾಧರಯ್ಯ,ಅಧೀಕ್ಷಕರು, ಬಸವೇಶ್ವರ ಶಿಕ್ಷಕರ ತರಬೇತಿ ಮಹಾವಿದ್ಯಾಲಯ ಶ್ರೀಮಠ
4 ಶ್ರೀ ಜಿ. ಶಿವಶಂಕರ್, ಪ್ರಾಚಾರ್ಯರು, ಸಿದ್ಧಗಂಗಾ ಕಲಾ ವಿಜ್ಞಾನ ಮತ್ತು ವಾಣಿಜ್ಯ ಕಾಲೇಜು, ತುಮಕೂರು
5 ಶ್ರೀ. ಕೆ. ಹೆಚ್. ಪರಮಶಿವಯ್ಯ, ಪ್ರಾಚಾರ್ಯರು ಸಿದ್ಧಗಂಗಾ ಮಹಿಳಾ ಕಾಲೇಜು, ತುಮಕೂರು
6 ಶ್ರೀ. ಸಿ. ಎಸ್. ಸಿದ್ಧಲಿಂಗಯ್ಯ, ಪ್ರಾಚಾರ್ಯರು, ಸಿದ್ಧಗಂಗಾ ಪದವಿ ಪೂರ್ವ ಕಾಲೇಜು, ತುಮಕೂರು
7 ಶ್ರೀ. ಎಸ್. ಪಿ. ಶಿವಶಂಕರ್, ಪ್ರಾಚಾರ್ಯರು, ಸಂಸ್ಕೃತ ಕಾಲೇಜು, ಶ್ರೀ ಮಠ
8 ಶ್ರೀ. ಕೆ. ಸಿ ಶಿವಗಂಗಯ್ಯ, ಮುಖ್ಯೋಪಾಧ್ಯಾಯರು ಶ್ರೀ ಬಸವೇಶ್ವರ ಉನ್ನತ ಪ್ರೌಢ ಶಾಲೆ, ಶ್ರೀ ಮಠ
9 ಶ್ರೀ. ಎಸ್. ವಿಶ್ವನಾಥಯ್ಯ, ಮುಖ್ಯೋಪಾಧ್ಯಾಯರು ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆ, ಶ್ರೀ ಮಠ

## ಸಂಪಾದಕ ಮಂಡಳಿ

ಪ್ರಧಾನ ಸಂಪಾದಕರು
**ಪ್ರೊ॥ ಚನ್ನಪ್ಪ ಎರೆಸೀಮೆ**

ಸಂಪಾದಕರು
**ಹೆಚ್. ವಿ. ವೀರಭದ್ರಯ್ಯ**

ಸಹ ಸಂಪಾದಕರು
**ಬಿ. ವೀರಭದ್ರಯ್ಯ, ಪಿ. ಎಸ್. ಚಂದ್ರಶೇಖರಯ್ಯ.**

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ; ಮೇಲಾಗಿ ಶ್ರೀಮಠದ ಮುಖವಾಣಿ. ಪೂಜ್ಯ ಶ್ರೀ ಶ್ರೀ ಡಾ॥ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ, ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ, ಚಿಂತನ, ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

# ಸಂಪಾದಕೀಯ

## ಪಂಚಬ್ರಹ್ಮೋತ್ಸವ,

ಪಂಚಬ್ರಹ್ಮೋತ್ಸವ ಶ್ರೀ ಮಠದ ಶ್ರೀ ಸಿದ್ಧಲಿಂಗೇಶ್ವರ ಜಾತ್ರಾ ಸಂದರ್ಭದಲ್ಲಿ ನಡೆಯುವ ಒಂದು ವಿಶಿಷ್ಟ ಉತ್ಸವ; ಅರ್ಥಪೂರ್ಣ ಮಹೋತ್ಸವ. ಪಂಚವೆಂಬ ಸಂಖ್ಯೆ ಸಾಂಕೇತಿಕವಾದುದು - ಪಂಚಶಕ್ತಿಗಳಿಗೆ, ಪಂಚಭೂತಗಳಿಗೆ, ಪಂಚ ತತ್ವಗಳಿಗೆ, ಪಂಚಆಚಾರಗಳಿಗೆ, ಬ್ರಹ್ಮ ಸತ್ಯಕ್ಕೆ ಸಾಂಕೇತಿಕ. ಬ್ರಹ್ಮವನ್ನು ಪರ ವಸ್ತುವೆಂದೂ ಗೌರವದಿಂದ ಗುರುತಿಸಿದ್ದಾರೆ. ಇಂತಹ ಅರ್ಥಪೂರ್ಣವಾದ ಪಂಚ ಬ್ರಹ್ಮೋತ್ಸವ ಶ್ರೀ ಮಠದಲ್ಲಿ ಪ್ರತಿವರ್ಷನಡೆದು ಬರುತ್ತಿದೆ. ವೀರಶೈವ ಧರ್ಮದಲ್ಲಿ ಗುರು, ಲಿಂಗ, ಜಂಗಮ ಅತ್ಯಂತ ಎತ್ತರದ ಗೌರೀಶಂಕರಗಳು. ಲಿಂಗದ ಮುಖವಾದ ಗುರುವನ್ನು, ಲಿಂಗದ ಬಾಯಿಯಾದ ಜಂಗಮವನ್ನು ತೃಪ್ತಿ ಪಡಿಸುವುದೇ ನಿಜವಾದ ಲಿಂಗಪೂಜೆ ಎನ್ನುತ್ತಾರೆ.

ಮರದ ಬೇರು ಭೂಮಿಯಾಧಾರದಲ್ಲಿ ನೀರುಣ್ಣುವಂತೆ ಸಮಾಜ ಮಧ್ಯದಲ್ಲಿ ಸಂಚರಿಸುತ್ತ, ಸಮಾಜದ ಒಂದಂಗವೇ ಆಗಿ ಸಮಾಜೋದ್ಧರಣದ ಕಾರ್ಯದಲ್ಲಿ ತೊಡಗುತ್ತಾನೆ. ಜಂಗಮವೆಂದರೆ ಸದಾ ಚಲನ ಶೀಲವಾದ, ಪರಿವರ್ತನ ಲಕ್ಷಣವನ್ನೊಳಗೊಂಡ ಎಂದೂ ಕ್ಷಯಿಸಲಾರದ ನಿತ್ಯಸತ್ಯವೆಂದೇ ಅರ್ಥ. ಶರಣಧರ್ಮದಲ್ಲಿ ಜಂಗಮಕ್ಕೆ ವಿಶೇಷಮನ್ನಣೆ. ಅಂತಹ ಜಂಗಮಾರಾಧನೆಯಲ್ಲಿ ವಿಶೇಷಸಂತೋಷವನ್ನು ಕಾಣುವ ಶ್ರೀ ಮಠದ ಪರಮ ಪೂಜ್ಯ ಶ್ರೀ ಶ್ರೀಗಳವರು ತಾವೇ ನಿರಾಭಾರಿ ಜಂಗಮ ಪುಣ್ಯಮೂರ್ತಿಗಳಾಗಿದ್ದು ಪಂಚಬ್ರಹ್ಮೋತ್ಸವಕ್ಕೆ ವಿಶೇಷಗಮನ ಕೊಡುತ್ತ ನಡೆದಿದ್ದಾರೆ. ಜಾತ್ರಾ ಸಂದರ್ಭದಲ್ಲಿ ನಡೆಯುವ ಈ ಉತ್ಸವದಂದು, ನಾಡಿನ ಮೂಲೆ ಮೂಲೆಗಳಲ್ಲಿ ಅರಳಿರುವ ವೀರಶೈವ ಮಠಗಳ ಜಂಗಮ ಮೂರ್ತಿಗಳನ್ನು ಆಹ್ವಾನಿಸಿ ಅವರುಗಳು ಮಾಡುತ್ತ ಬಂದಿರುವ ಸಮಾಜ ಸೇವೆಯನ್ನು ಗೌರವಿಸಲೆಂಬಂತೆ ಪಂಚಬ್ರಹ್ಮೋತ್ಸವ ಏರ್ಪಡಿಸುತ್ತಾರೆ. ಶರಣ ಸಾಹಿತ್ಯ ಸಿದ್ಧಾಂತದ ಸಾಕಾರಮೂರ್ತಿಗಳಾದ ಶ್ರೀ ಶ್ರೀಗಳವರೇ ಮುಂದೆ ನಿಂತು ವಿವಿಧ ಮಠಾಧೀಶರನ್ನು ಪಲ್ಲಕ್ಕಿಯ ಮೇಲೆ ಕೂರಿಸಿ, ಪುಷ್ಪಾಲಂಕಾರ, ದೀಪಾಲಂಕಾರ, ಮಂಗಳವಾದ್ಯಗಳೊಂದಿಗೆ, ನಡೆಯುವ ಉತ್ಸವ ವೈಶಿಷ್ಟ್ಯಪೂರ್ಣವಾದದು. "ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ" ಎಂಬ ಬಸವಣ್ಣನವರ ನುಡಿಗೆ ವಿಳಾಸವಾಗಿದ್ದಾರೆ ಪರಮಪೂಜ್ಯ ಶ್ರೀ ಶ್ರೀಗಳು ನಿತ್ಯ ನಾಲ್ಕು ಸಹಸ್ರ ವಿದ್ಯಾರ್ಥಿಗಳಿಗೆ ದಾಸೋಹ ಮಾಡುತ್ತ ಸಹಸ್ರಾರು ಯಾತ್ರಾರ್ಥಿಗಳಿಗೆ ಕಾಯಕದ ಮಾರ್ಗ ತೋರಿಸುತ್ತ, ಶೈಕ್ಷಣಿಕ ರಂಗದಲ್ಲಿ ಮೌನ ಕ್ರಾಂತಿಯನ್ನೇ ನಡೆಸಿರುವ ಪೂಜ್ಯರು ಬೇರೆ ಮಠದ ಗುರುಗಳನ್ನು ಉತ್ಸವ ಮಾಡಿಸುವ ಮೂಲಕ ಜಂಗಮತ್ವಕ್ಕೇ ಸುವರ್ಣದ ಕಲಶವನ್ನಿಟ್ಟಿದ್ದಾರೆ. ಪಂಚಬ್ರಹ್ಮೋತ್ಸವಕ್ಕೆ ವಿಶೇಷ ಆಯಾಮವನ್ನು ಕಲ್ಪಿಸಬೇಕೆಂಬ ಶಿವಸಂಕಲ್ಪ ಚಿತ್ತರಾಗಿದ್ದಾರೆ. ಪರಮ ಪೂಜ್ಯರ ಅಪೇಕ್ಷೆ ತುಂಬಿ ಬರುವಂತಾಗಲಿ ಎಂದು ವಿನಮ್ರ ಬಿನ್ನಹವನ್ನು "ಸಿದ್ಧಗಂಗಾ" ಅರ್ಪಿಸುತ್ತದೆ.

ಮಾಣಿಕ್ಯ ದೀಪ್ತಿ

# ಜ್ಞಾನಾನುಭವ

—ಟಿ. ಆರ್. ಮಹಾದೇವಯ್ಯ,
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

ಬದುಕಿನಲ್ಲಿ ಜ್ಞಾನಾನುಭವಗಳು ಹಲವು ಮೂಲದಿಂದ ಬರುತ್ತವೆ. ಕೆಲವು
ಪ್ರಯತ್ನ ಪೂರ್ವಕ ಮತ್ತೆ ಕೆಲವು ಅಪ್ರಯತ್ನವಾಗಿ ಅಯಾಚಿತವಾಗಿ, ಗ್ರಂಥಾಧ್ಯ
ಯದ, ಅನುಭವಿಗಳೊಡನಾಟ, ದೇಶಪರ್ಯಟನ, ಸ್ವಂತ ಕೃಷಿ ಇವು ಜ್ಞಾನಾರ್ಜನೆಯ
ಸಾಧನಗಳಲ್ಲಿ ಕೆಲವು. ಇದೆಲ್ಲಕ್ಕೂ ಮುಖ್ಯ ನಮ್ಮ ಸಹೃದಯತ ಹಾಗೂ ಗ್ರಹಣ,
ಶಕ್ತಿ. ಹತ್ತೂನಿಟ್ಟಿನಿಂದ ಹಲವು ಮುಖವಾಗಿ ದೊರೆಯುವ ಜ್ಞಾನವನ್ನಾಗಲೀ ಗ್ರಹಿ
ಸುವ ಹೃದಯವಂತಿಕೆ ವ್ಯಕ್ತಿಗೆ ಇಲ್ಲದಿದ್ದರೆ ಅದಷ್ಟೂ ಅವನಿಗೆ ವ್ಯರ್ಥವೇ. ತೆಗೆದು
ಕೊಂಡ ಅಪೂರ್ವಭಾಗ್ಯವೊಂದು ತಪ್ಪಿಹೋಗುತ್ತದೆ ಮತ್ತೆ ಬಾರದಂತೆ.

ಮನುಷ್ಯ ತಾನು ಬದುಕಿನಲ್ಲಿ ಕಂಡ ಸುಂದರ ಸುರಮ್ಯ ದೃಶ್ಯಗಳನ್ನು ಸೆರೆಹಿ
ಡಿಯುವುದನ್ನು ಕಲಿತಿದ್ದಾನೆ- ರೇಖಾಚಿತ್ರ ಛಾಯಾಚಿತ್ರಗಳ ಮೂಲಕ. ಅದರಂತೆ
ಬಾಳಿನಲ್ಲಿ ಕಂಡಂತೆ ಅಪೂರ್ವ ಅನುಭವಗಳನ್ನು, ಅಸಾಧಾರಣ ಭಾವ ಲಹರಿಗಳನ್ನು
ವಿಚಾರವೀಚಿಗಳನ್ನು ದಾಖಲಿಸ ಕಲಿತಿದ್ದಾನೆ – ಶಬ್ದಾರ್ಥ ಕಲೆಯಿಂದ, ಸಾಹಿತ್ಯ
ದಿಂದ. ಇದರಿಂದಾದ ಉಪಕಾರ ಬಹಳ ದೊಡ್ಡದು. ಎಂದೊಬ್ಬ ವ್ಯಕ್ತಿ ಕಂಡದ್ದು,
ಉಂಡದ್ದು, ಆ ಕ್ಷಣದ್ದು, ವ್ಯಕ್ತಿ ನಿಷ್ಠವಾದ ಅನುಭವ, ಹಲವರದಾಗಿ ಶಾಶ್ವತ
ವಾಗಿ ಓದಿದ, ಕೇಳಿದ ಎಲ್ಲರಿಗೂ ಅದನ್ನು ಹೊಚ್ಚಹೊಸತಾಗಿ ಅನುಭವಿಸುವಂ
ತಾಯಿತು, ಇದಕ್ಕೆಲ್ಲಾ ಕಾರಣವಾದದ್ದು ಸಹೃದಯತೆ.

ಬದುಕಿನಲ್ಲಿ ಜ್ಞಾನಾನುಭವ ಒದಗುವ ಪ್ರಸಂಗಗಳೆಲ್ಲವೂ ಮಹತ್ವವೇ
ಇರಬೇಕೆಂದಲ್ಲ. ನಮ್ಮ ಬಾನಂಗಣದಲ್ಲಿ ಸುಳಿದು ಪ್ರಭಾವ ಬೀರಿದ ವ್ಯಕ್ತಿ
ಮಹಾಜ್ಞಾನಿಯೇ ಆಗಿರಬೇಕಿಲ್ಲ. ಸಣ್ಣ ಘಟನೆಯೊಂದು, ಕಿರಿವಯಸ್ಸಿನ ಮಗು
ವೊಂದು ನಮಗೆ ಮಹತ್ವದ ವಿಚಾರವನ್ನ ಮನವರಿಕೆಯುಂಟುಮಾಡಿ ನಮ್ಮ ಮನದ



ಯಾವುದೋ ಮಗ್ಗುಲಿನ ಕತ್ತಲೆಯ ಮೇಲೆ ಜಗ್ಗನೆ ಬೆಳಕನ್ನು ಚೆಲ್ಲಿ ಬಿಡಬಹುದು.
ಅದನ್ನು ಮನದೆರದು ಸ್ವೀಕರಿಸುವ ಹೃದಯವಂತಿಕೆ ಇರಬೇಕು, ಅಷ್ಟೆ.

ಇಪ್ಪತ್ತೆಳು ವರ್ಷಗಳ ಹಿಂದಿನ ಮಾತು, ನನ್ನವೃತ್ತಿ ಜೀವನದ ಅರಂಭದಲ್ಲಿ
ಮಲೆನಾಡಿನ ಹೈಸ್ಕೂಲೊಂದರಲ್ಲಿ ಉಪಾಧ್ಯಾಯನಾಗಿದ್ದೆ, ಕಲಿತಿದ್ದೆಲ್ಲವನ್ನು ವಿದ್ಯಾ
ರ್ಥಿಗಳಿಗೆ ತಿಳಿಸಬೇಕೆಂಬ ಉತ್ಸಾಹದ ದಿನಗಳವು. ಉಪಾಧ್ಯಾಯರು ಇಲ್ಲದ ತರ-
ಗತಿಗಳನ್ನು ತೆಗೆದುಕೊಂಡು ಅವರಿಗೆ ನಿಯತಪಾಠಪಟ್ಟಿಗಿಂತ ಹೆಚ್ಚಿನ ವಿಚಾರ
ಗಳನ್ನು ತಿಳಿಸುತ್ತಿದ್ದೆ. ವರ್ಷಕಳೆದುದೇ ತಿಳಿಯಲಿಲ್ಲ, ವಾರ್ಷಿಕ ಪರೀಕ್ಷೆಗಳು ಆದವು.
ಮುಂದಿನ ವರ್ಷ ನಾನು ಅಲ್ಲಿಗೆ ಹೋಗುವ ಸಾಧ್ಯತೆಗಳು ಇರಲಿಲ್ಲವಾಗಿ ವಿದ್ಯಾ-
ರ್ಥಿಗಳು ನನಗೆ ಬೀಳ್ಕೊಡಿಕೆ ಸಮಾರಂಭವನ್ನು ಏರ್ಪಡಿಸಿದ್ದರು. ಅವರಲ್ಲಿ ಕೆಲ
ವರು ಪತ್ರಮುಖೇನ ಸಂಪರ್ಕವಿಟ್ಟುಕೊಳ್ಳಬಯಸಿ ನನ್ನ ವಿಳಾಸವನ್ನು ಪಡೆದು
ಕೊಂಡರು.

ತಿಂಗಳುರುಳಿದವು. ನಾನು-ನಗರ ಸೇರಿದೆ-ಕಾಲೇಜಿನ ಅಧ್ಯಾಪಕನಾಗಿ: ನಗರ
ಜೀವನದ ಯಾಂತ್ರಿಕತೆಯಲ್ಲಿ ಕ್ರಮೇಣ ಹಿಂದಿನ ನೆನಪೂ ಮಸಕಾಗತೊಡಗಿತು.
ಇದ್ದಕ್ಕಿದ್ದಂತೆ ಒಂದು ಪತ್ರ ಬಂತು, ಊರಿನ ವಿಳಾಸಕ್ಕೆ ಹೋಗಿ ಮತ್ತೆ ಕಾಲೇಜಿನ
ವಿಳಾಸಕ್ಕೆ ಪುನರ್ ನಿರ್ದೇಶಿತವಾಗಿ. ಬರೆದವಳು ಆ ಮಲೆನಾಡ ಶಾಲೆಯ 9ನೇ
ತರಗತಿಯ ವಿದ್ಯಾರ್ಥಿನಿ-

ಪತ್ರ ಅತ್ಮೀಯ ಭಾವದಿಂದಲೇ ಅರಂಭಗೊಂಡಿತು—‘ಪ್ರೀತಿಯ ಅಣ್ಣಾ,
ಎಂಬ ಸಂಬೋಧನೆಯೊಡನೆ, ‘ನೀನು ಆದಿನ ಹೇಳಿದ ಕಥೆ ನನಗೆ ಮರೆಯ
ಲಾಗುತ್ತಿಲ್ಲ. ಅದರಿಂದ ನೀನು ಹಿಂಡಿ ತೆಗೆದ ವಿಚಾರವಿನ್ನು ನನ್ನ ತಲೆ ತಿನ್ನು
ತ್ತಾ ಇದೆ. ಆದೆಲ್ಲಾ ಸರಿ. ಆದರೆ ನಿನ್ನ ಶಿಸ್ತು ನಮ್ಮನ್ನು ಅನೇಕ ಸಲ ಸುಸ್ತು
ಮಾಡುತ್ತಿತ್ತು, ಅದು ನಿನಗೆ ಗೊತ್ತಾ ?...... , ಇದು ಆಕೆ ತನಗೆ ಅನಿಸಿದ್ದನ್ನು
ನೇರವಾಗಿ, ನಿರ್ಭಿಡೆಯಿಂದ ಬರೆದ ಧಾಟಿ. ಪತ್ರದುದ್ದಕ್ಕೂ ನನ್ನನ್ನು ಏಕವಚನ
ದಲ್ಲೇ ಸಂಬೋಧಿಸಿದಳು. ಅವಳ ಈ ಸಲಿಗೆ, ಏಕವಚನ ಪ್ರಯೋಗದ ಪ್ರಹಾರ
ನನ್ನ ಸ್ವಾಭಿಮಾನವನ್ನು ಕೆಣಕುವಂತಿದ್ದವು. ಎಲಾ ಇವಳ ಸೊಕ್ಕೆ ? , ಎಂಬ
ಉದ್ಗಾರ ಮನದಾಳದಿಂದ ತಂತಾನೇ ಹೊರ ಬಿತ್ತು ! ಪತ್ರ ಓದಿ ಕೊನೆ ಮುಟ್ಟಿಸಿ
ಇಂತು ನಿನ್ನ ತಂಗ್ಯಮ್ಮ’ ಎಂಬ ಒಕ್ಕಣೆಯೊಡನೆ ಸಹಿಮಾಡಿರುವುದನ್ನು ನೋಡು
ವಷ್ಟು ಹೊತ್ತಿಗೆ ನನ್ನ ಮನದ ತುಂಬ ಸೋದರ್ಯ ಭಾವಕ್ಕಿಂತ ಬಿಗುಮಾನ,
ಪ್ರತಿಷ್ಠೆಯಿಂದ ಉದ್ದೀಪಿತವಾದ ಕೋಪ–ತಾಪಗಳೇ ತಾಂಡವವಾಡುತ್ತಿದ್ದವೆನ್ನ
ಬೇಕು ! ಪತ್ರದಬಗ್ಗೆ ಒಂದು ರೀತಿಯ ತಿರಸ್ಕಾರಭಾವ ಸುಳಿದಿರಲೂ ಸಾಕು !

ಪತ್ರದ ಕೊನೆಯಲ್ಲಿ ಮರೆತ ಮಾತೋ ಎಂಬಂತೆ ಒಂದೆರಡುಸಾಲು ಬರೆದದು ಕಾಣಿಸಿತು. ಇಷ್ಟು ಆಗಿದೆ, ಆಗಲಿ ಅದನ್ನು ಓದಿ ಬಿಡೋಣವೆಂದು ಓದಿದೆ ಅದು ಹೀಗಿತ್ತು.

"ಕಾಗದದಲ್ಲಿ ನಿನ್ನನ್ನು ಏಕವಚನದಲ್ಲೇ ಕರೆದಿದ್ದೇನೆ. ಏಕೆ ಗೊತ್ತಾ ? ನಾವು ದೇವರನ್ನು ನೆನೆಸುವಾಗ, ಕರೆಯುವಾಗ ಬಹುವಚನದಲ್ಲಿ ಕರೆಯುತ್ತೇವೆಯೆ ? ಕಷ್ಟ ಕಾಪಾಡೊ, ಶಿವಾ ನನ್ನ ಕಷ್ಟ ಪಾರುಮಾಡೋ ಅನ್ನುತೇವೆ. ಅವನನ್ನು ಕೃಷ್ಣಯ್ಯ ಅಂತಾಲೂ, ಶಿವಪ್ಪ ಅಂತಾಲೂ ಕರೆಯೋದಿಲ್ಲ. ಅದಕ್ಕೆ ನಿನ್ನನ್ನು ಹಾಗೇ ಏಕವಚನದಲ್ಲೇ ಕರೆಯಬೇಕೆನಿಸಿತು.

ಈ ಸಾಲುಗಳನ್ನು ಓದುತ್ತಿದ್ದಂತೆ ಜ್ಞಾನದ ಅಲೆಯೊಂದು ರಪ್ಪನೆ ಬಡಿದಂತಾಯಿತು. ಮನಸ್ಸನ್ನು ಸುತ್ತಿ ಮುತ್ತಿದ್ದ ಪ್ರತಿಷ್ಠೆ-ಬಿಗುಮಾನಗಳ ಬಿಗಿತ ಕಳಚಿತು. ಸಹೃದಯತೆ ಅರ್ಥವಾಯಿತು. ಅಹಂಕಾರ ಒಳಸೋರಿತ್ತು. ನನ್ನ ಮನ ಆ ಪತ್ರಕ್ಕೆ ನಮನ ಸಲ್ಲಿಸಿತು.

ಯಾವ ವಿಶ್ವವಿದ್ಯಾಲಯವೂ ಮನವರಿಕೆ ಮಾಡದ ಪಾಠವನ್ನು ಆ ಹುಡುಗಿ, ಬಹುಶಃ ಅವಳಿಗೇ ಅರಿವಿಲ್ಲದೆ ಪರಿಣಾಮಕಾರಿಯಾಗುವಂತೆ ನನಗೆ ಕಲಿಸಿ ಬಿಟ್ಟದ್ದಳು ಕ್ಷಣಕಾಲ ಸ್ತಂಭೀಭೂತನಾದೆ. ನೆನಪಿನ ಸುರಳಿ ಬಿಚ್ಚಿಕೊಳ್ಳತೊಡಗಿತು. ಆಕೆಯ ಚಿತ್ರ ಚಿತ್ತ ಭಿತ್ತಿಯಲ್ಲಿ ಅಸ್ಪಷ್ಟವಾದರೂ ಮೂಡಿ ನಿಂತಿತು. ವಾಸ್ತವವಾಗಿ ತರಗತಿಗಳಲ್ಲಿ ಆಕೆ ತುಂಬಾ ಸೌಮ್ಯೆ. ಮಾತನಾಡಿದ್ದೇ ಇಲ್ಲವೆನ್ನಬೇಕು. ಆಕೆ ಜಾಣೆಯೆಂಬುದು ಗೊತ್ತಿದ್ದರೂ, ಇಂಥ ಪ್ರಬುದ್ಧ ಚೇತನಳೆಂಬುದನ್ನು ತಿಳಿಯಲಾಗಿರಲಿಲ್ಲ. ಯಾವ ಯಾವ ಹೃದಯ ಕುಹರದಲ್ಲಿ ಭಗವಂತ ಎಂಥೆಂಥ ಜಾಣಿನ ಚದುರಿನ ಸರಕನ್ನು ಬಚ್ಚಿಟ್ಟದ್ದಾನೋ, ಅವು ಯಾವಾಗ ಪ್ರಕಟವಾಗುವುವೋ ? ಹೇಳಬರದು.

ಜ್ಞಾನಕ್ಕೆ ವಯಸ್ಸು, ಲಿಂಗಗಳ ಅಂತರವಿಲ್ಲವೆಂಬ ಮಾತು ಎಷ್ಟು ಸತ್ಯ ? ಅಲ್ಲದೆ ಸುಳಿದು ಬೀಸುವಗಾಳಿ, ಬಿರಿವ ಮೊಗ್ಗು, ಉಲಿವ ಪಕ್ಷಿ-ಇವುಗಳಿಂದಲೇ ವಾಚ್ಯವಾಗಲ್ಲದಿದ್ದರೂ ಸೂಚ್ಯವಾಗಿ ನಾವು ತಿಳಿವನ್ನು ಪಡೆಯ ಬಹುದೆನ್ನುತ್ತಾರೆ. ದೊಡ್ಡವಾರು. ಅಂದ ಮೇಲೆ ಆ ಹೆಣ್ಣು ಮಗುವಿನಿಂದ ಜ್ಞಾನ ಕೋಶಕ್ಕೊಂದು ಅಮೂಲ್ಯ ವಿಚಾರ ಸೇರ್ಪಡೆಯಾದುದಕ್ಕೆ ಆಶ್ಚರ್ಯ ವೆನಿಸಲಿಲ್ಲ. ಇಂಥ ಅಪೂರ್ವ ಜ್ಞಾನಸುಧೆಗಾಗಿ ಹಾತೊರೆಯುವ ಮನುಷ್ಯ ತನ್ನ ಹೃದಯದ ಕಿಟಕಿಗಳನ್ನೆಲ್ಲ ತೆರೆದು ಸೂಕ್ಷ್ಮಗ್ರಾಹಿಯಾಗಿ ಕಾದಿರಬೇಕಲ್ಲವೆ ಎನ್ನಿಸಿತು ಅಷ್ಟೆ.



(ಜನವರಿ ಸಂಚಿಕೆಯಿಂದ ಮುಂದುವರಿದಿದೆ)

# ಜನಪದ ಸಾಹಿತ್ಯದಲ್ಲಿ ವೀರಶೈವ ಧರ್ಮ

ಶ್ರೀ ಎಚ್.ವಿ. ವೀರಭದ್ರಯ್ಯ, ಎಂ.ಎ,

" ಮನುಷ್ಯ ದೊಡ್ಡವನೆನಿಸುವುದು ಹುಟ್ಟಿನಿಂದಲ್ಲ, ಅವನು ಸಾಧಿಸುವ ಜ್ಞಾನ ಕ್ರಿಯೆಗಳಿಂದ, ಸದ್ಭಕ್ತಿ ಸದಾಚಾರಗಳಿಂದ, ಜನಹಿತಕ್ಕಾಗಿ ಆತ ಕೈಗೊಳ್ಳುವ ಸತ್ಯ ಶುದ್ಧ ಕಾರ್ಯಗಳಿಂದ ! ಹೀಗೆ ಭಕ್ತಿ ಜ್ಞಾನ ಕ್ರಿಯೆಗಳದೊಂದು ಅಪೂರ್ವ ಸಮನ್ವಯ. " ಯಾರೂ ಹುಟ್ಟಿನಿಂದೆ ಶ್ರೇಷ್ಠರೆನಿಸಿಕೊಳ್ಳು ವುದಿಲ್ಲ ವೆಂಬುದನ್ನು ವೀರ ಶೈವ ಧರ್ಮ ಸಾರಿ ಸಾರಿ ಹೇಳಿತು, ಆದರೂ ಅದರ ಪೂರ್ಣಸಾಕಾರ ಕಾಣಬಾರದೇ ಹೋದುದು ದುರ್ದೈವದ ವಿಚಾರ. ನಮ್ಮಲ್ಲಿನ್ನೂ ಜಾತಿ ಜಂಗಮತ್ವಕ್ಕೆ ಪ್ರಾಶಸ್ತ್ಯ-ಕೊಡುವ ಪರಿಪಾಠಹೋಗಿಲ್ಲ. ಆದರೆ ಜನಪದರು ಇಂಥವನ್ನು ಕಟುವಾಗಿಯೇ ಟೀಕಿಸುತ್ತಾ.

ಜಂಗಮರಾದ್ರಿಂದ ಜಂಗ ಧರಿಸಲು ಬೇಕು
ಮಂಗ ಬುದ್ಧಿಗಳ ಬಿಡಬೇಕ॥ ಕೈಯೊಳ
ಲಿಂಗದ ಗ್ಯಾನ ಇರಬೇಕು॥

ಜಂಗಮನಿಗೂ ಕರ್ತವ್ಯಉಂಟು. ಜಂಗುಕಟ್ಟೆ ಧರ್ಮ ಪ್ರಸಾರ, ಧರ್ಮ-ಬೋಧನೆ ಧರ್ಮದ ಆಚರಣೆ ಮುಂತಾದುವುಗಳನ್ನು ತಿಳಿಸುವ ಕಾಯಕ ಅವನದಾ-ಗಿತ್ತು. ಅಷ್ಟಾವರಣ, ಪಂಚಾಚಾರ ಷಟ್‌ಸ್ಥಲಗಳ ಸ್ವರೂಪವನ್ನು ಭಕ್ತಸಮೂ-ಹಕ್ಕೆ, ತಿಳಿಸಲು ಗ್ರಾಮದಲ್ಲಿ ಒಂದುರಾತ್ರಿ, ನಗರದಲ್ಲಿ ಐದು ರಾತ್ರಿಗಳಷ್ಟು ಕಾಲ ವಾಸ್ತವ್ಯ ಮಾಡುತ್ತ ಸಂಚಾರ ಮಾಡಬೇಕಾಗಿತ್ತು. 'ಜಂಗಮ' ಶಬ್ದವೇ 'ಚಲನ ಶೀಲ' ವೆಂಬುದನ್ನು ಸೂಚಿಸುತ್ತದೆ. ಅಷ್ಟ ಆವರಣಗಳ ಸಹಾಯದಿಂದ ಪಂಚ ಆಚಾರಗಳ ಮಾರ್ಗದಲ್ಲಿ, ಷಟ್‌ಸ್ಥಲಗಳ ಮೆಟ್ಟಲನ್ನು ಹತ್ತಿ ಇಳಿಯುವ ಸಾಧಕನಾಧವನು ಜಂಗಮ. " ನಿಂದರೆ ಭಕ್ತನಾಗಿ ನಿಲ್ಲಬೇಕು, ಸುಳಿದರೆ ಜಂಗಮ-ವಾಗಿ ಸುಳಿಯಬೇಕು " -ಎಂದಿಲ್ಲವೆ ಪ್ರಭುದೇವರು. ಅಂಥ ಜಂಗಮರುವೀರಶೈವ ಧರ್ಮದ ಪ್ರಸಾರದಲ್ಲಿ ತೊಡಗಿದ್ದುಂಟು ; ಜನಪದದಲ್ಲಿ ಬೆಳಗಿದ್ದುಂಟು. ಜಂಗಮ-

ನಿಗ್ಗೆ ಮಂಗ ಬುದ್ಧಿ, ಇರಬಾರದು, ಕೈಯೊಳಗಿನ ಲಿಂಗದ 'ಗ್ಯಾನ, ಇರಬೇಕು ಎನ್ನುತ್ತದೆ ಜನಪದವಾಣಿ, ಶರಣರು ಮಾಡಿದ ಸುಧಾರಣೆಯ ಮುಕ್ತಾಫಲ. ಕಾಯ. ಕಕ್ಕೆಯಾರೂಹೊರತಲ್ಲ, ಕಾಯಕದಿಂದ ಯಾರಿಗೂ ವಿನಾಯಿತಿ ಇಲ್ಲ ಏಕೆಂದರೆ.

ಕ್ರಿಯೆಯಿಲ್ಲದ ಭಕ್ತಮನುಜ
ಕ್ರಿಯೆಯಿಲ್ಲದ ಜಂಗಮರಾಕ್ಷಸ
ಕ್ರಿಯೆಯಿಲ್ಲದ ಪ್ರಸಾದಿ ಯವನ
ಕ್ರಿಯೆಯಿಲ್ಲದ ಪ್ರಾಣಲಿಂಗಿ ಭವಿ
ಕ್ರಿಯೆಯಿಲ್ಲದ ಶರಣ ಅಜ್ಞಾನಿ
ಕ್ರಿಯೆಯಿಲ್ಲದ ಲಿಂಗೈಕ್ಯ ಜನನಕ್ಕೊಳಗು ನೋಡಾ
ಕೂಡಲಚನ್ನ ಸಂಗಮ ದೇವ ||

ಎನ್ನುತ್ತಾರೆ ಚನ್ನ ಬಸವಣ್ಣ, ಕ್ರಿಯೆ, ಕಾಯಕ, ಭಕ್ತ, ಜಂಗಮ, ಪ್ರಸಾದಿ ಪಾಣಲಿಂಗಿ, ಶರಣ, ಐಕ್ಯ ಯಾರನ್ನೂ ಬಿಟ್ಟಿದ್ದಲ್ಲ, ಬಿಟ್ಟರೆ ಕಾಯಕವಲ್ಲ. ಮರ್ತ್ಯಕ್ಕೆ ಬಂದ ನಂತರ ಕರ್ತಾರನ ಕಮ್ಮಟದಲ್ಲಿ ಸುಮ್ಮನೆ ಕೂರುವಂತಿಲ್ಲ.

ಮರ್ತ್ಯಕ್ಕೆ ಬಂದೀದಿ ಕರ್ತವ್ಯ ಮಾಡಾಕ
ಮರ್ತು ಕುಂತೀ ಯಾಕಮ್ಯುರ್ತ |ಒಯ್ದೀತು
ತುರ್ತುಮಾಡಣ್ಣ ನಿನ್ನಕೆಲಸ ||

ಎನ್ನುತ್ತದೆ ಜನಪದರ ಮಾತು. ಕಾಯಕದಲ್ಲಿ ಆಲಸ್ಯಸಲ್ಲ, ನಿರಂತರ ಎಚ್ಚರಿಕೆ ಅಗತ್ಯ. 'ತುರ್ತು ಮಾಡಣ್ಣ ನಿನ್ನ ಕೆಲಸ' —ಎಂದೇ ಅದರ ತಗಾದೆ. ಕುಂಬಾರ ಗುಂಡಯ್ಯನಂತ ಶರಣರ ಜೀವನದಲ್ಲಿ ಕಾಯಕ ಎಂಥ ಎತ್ತರ-ಬಿತ್ತರಗಳನ್ನು ಹಾಸು ಬೀಸುಗಳನ್ನು ಪಡೆದಿತ್ತೆನ್ನುವುದನ್ನೂ ಕಾಣಬಹುದು.

ಅನುಭಾವ ಆವಿಗೆಗೆ ಕನಲೆಂಬ ಕಿಚ್ಚಿನ್ನ
ತಣಿ ವಂತೆ ಸುಡಲು ಶಿವಭಕ್ತಿ | ಮಡಿಕೆಗಳ
ದಣುವಾರಿ ಹೋಯ್ತು ಕಾಯಕದ ||

ಅನುಭಾವ ಮತ್ತು ಅಭಿವ್ಯಕ್ತಗಳ ಸಾವಯವ ಶಿಲ್ಪವನ್ನಿಲ್ಲಿ ಕಾಣಬಹುದಲ್ಲವೆ? "ಅನುಭಾವ" ಎನ್ನುವುದು ಒಂದು ವಿಶೇಷವಾದ ಮಾನಸಿಕನಿಲುವು. ಆನಿಲುವಿನಲ್ಲಿ ಆತ ಕಂಡ ಕಾಣ್ಕೆಗಳು 'ಅನುಭಾವ ಸಾಹಿತ್ಯ' ದಲ್ಲಿ ಪ್ರಕಟವಾಗುತ್ತವೆ. ಅನುಭಾವಿಯ ಮೂಲತಃ ಭಕ್ತನೂ ಆಗುತಾನ್ತೆ ಆದರೆ ಭಕ್ತರಾದವರೆಲ್ಲಾ ಅನುಭಾವದ ನಿಲುವಿಗೆ



ಏರಿರುತ್ತಾರೆಂದು ಹೇಳಲುಬಾರದು. ಜನಪದಕವಿ ಇಲ್ಲಿ ಅನುಭಾವಿಯೂ ಆಗಿದ್ದಾನೆ.

ಹೀಗೆ "ಕ್ರಿಯಾರಹಿತವಾದ ಭಕ್ತಿಗೆ ವೀರಶೈವ ಧರ್ಮದಲ್ಲಿ ಯಾವ ರೀತಿಯ ಮನ್ನಣೆಯೂ ಇಲ್ಲ. ಭಕ್ತಿ ಎಂದರೆ ಭಗವಂತ ನಾಮಸ್ಮರಣೆ, ಅರ್ಚನೆ, ಭಜನೆ ಇವುಗಳಿಂದ ಮಾತ್ರ ಭಗವಂತನ ಸಾಕ್ಷಾತ್ಕಾರ ಸಾಧ್ಯ ಎಂಬ ಕ್ರಮ ವೀರ ಶೈವ ಧರ್ಮಕ್ಕೆ ಸಮ್ಮತವೆನಿಸಲಿಲ್ಲ. ಇವರ ಪ್ರಕಾರ ಕರ್ಮ ಎಂದರೆ ಯಜ್ಞ ಯಾಗಾದಿ ಗಳ ರೂಪದಲ್ಲಿ ನಡೆಯುವ ವೈದಿಕ ಕ್ರಿಯೆಯಲ್ಲ. ಇವರ ಪ್ರಕಾರ ಕರ್ಮ ಎಂದರೆ ಶರೀರವನ್ನು ದಂಡಿಸಿ ಮಾಡುವ ಕಾರ್ಯ. ಕಾಯಕದಲ್ಲಿ ಲೌಕಿಕ ಮತ್ತು ಪಾರ-ಮಾರ್ಥಿಕ ಕಲಾಭಗಳೆರಡೂ ಉಂಟು. ಕಾಯಕದಿಂದ ಆರ್ಥಿಕ ಸ್ವಾವಲಂಬನೆ ಸಾಧ್ಯ ವಾಗುತ್ತದೆ. ಅಂತೆಯೇ ಸಾಮಾಜಿಕ ಜನತೆಗೂ ಇದು ಒಂದು ಸುಲಭ ಸಾಧನ. ಶ್ರದ್ಧೆಯಿಂದ ಮಾಡುವ ಕಾಯಕ ಭಕ್ತಿಯಿಂದ ಮಾಡುವ ಪೂಜೆಗಿಂತಲೂ ಶ್ರೇಷ್ಠ ವಾದದ್ದು. ಭಗವಂತನಿಂದ ನಡೆಯುವ ಸೃಷ್ಟಿಕಾರ್ಯ ವೆಲ್ಲವೂ ಭಗವಂತನ ಕಾಯ ಕದ ಫಲ, ಭಗವದ್ಗೀತೆಯಲ್ಲಿ ಹೇಳಿದಂತೆ ಪರಮಾತ್ಮನು ಸದಾಕಾರ್ಯ ನಿರತನಾ ಗಿರುತ್ತಾನೆ." ಜನಪದರು ಮನಸಿಟ್ಟು ದುಡಿಯುವುದೇ, ಕಾಯಕ ಮಾಡುವುದೇ ಶಿವಪೂಜೆಯೆಂದು ನಡೆದುಕೊಂಡವರು.

ಕಲ್ ಹೂಡಿ ನೆನದೇನ ಕಲ್ಯಾಣದಯ್ಯನ
ಅಲ್ಲಿ ಕೂಡಲದ ಸಂಗಮನ | ಬಸವನ
ಸೊಲ್ಲು ಸೊಲ್ಲೀಗೆ ನೆನದೇನು ||

ಎಂದು ಬೀಸುವ ಕಲ್ಲಿಗೆ ಕೈ ಹಚ್ಚುತ್ತಲೇ ಕಾಯಕತತ್ವ ಪ್ರತಿ ಪಾದನೆ ಮಾಡಿದ ಅಣ್ಣ ಬಸವಣ್ಣನವರನ್ನು "ಸೊಲ್ಲು ಸೊಲ್ಲಿಗೆ" ನೆನೆದು ಬಾಳಿದರು, ಜನಪದರು ಮುಗ್ಧರು. ಅವರ ಹೃದಯ ಭೂಮಿಯಲ್ಲಿ ಬಿತ್ತಿದ ಶರಣರ ಕಾಯಕ ತತ್ವ ಹೂವಾಗಿ ಅರಳಿತು, ಅಷ್ಟೇಅಲ್ಲ, ಭಗವಂತನೂ ಕಾಯಕಯೋಗಿ ಎಂಬುದನ್ನು ಕಂಡು ಕೊಂಡರು. ಅವರು, ಭಗವಂತ ಎಲ್ಲೆಲ್ಲಿ, ಹೇಗ ಹೇಗೆ ಕಾಯಕ ನಿರತ ನಾಗಿದ್ದಾನೆಂಬುದನ್ನು ಅವರ ಒಳಗಣ್ಣು ಕಂಡಿದೆ.

ಹೂವಿನಾಗೆ ಹುದುಗ್ಯಾನ ಮೂಲ್ಯಾಗೆ ಮಲಗ್ಯಾನ
ಮೊಗ್ಗಾಗೆ ಕಣ್ಣು ತೆರೆದಾನ | ಲಿಂಗಯ್ಯನ ನೋದಟಿಗೆ
ನಿದ್ದೆ ಬಯಲಾಗಿ ||

ಜನಪದ ಕವಿ 'ಲಿಂಗಯ್ಯ ಹೂವಿನಲ್ಲಿ 'ಹುದುಗು' ವುದನ್ನು ಮೂಲೆಯಲ್ಲಿ 'ಮಲಗು' ವುದನ್ನು 'ಮೊಗ್ಗಲ್ಲಿ' 'ಕಣ್ಣುತೆರೆ' ಯುವುದನ್ನು-ನಿರಂತರ ಕ್ರಿಯಾ-ಶೀಲನಾಗಿರುವುನ್ನು ನೋಡಿ 'ನಿದ್ದೆ ಬಯಲುಗೊಂಡಿರುವ' ಈ ಪರಿ ಭವ್ಯವಾದದ್ದು

ಕಾಯಕದ ಕಣ್ಣಿಗೆ ಹೊಳೆದು ಬೆಳಗಿದ್ದು. ಜಗದ್ವ್ಯಾಪಿಯೂ, ಸರ್ವಾಂತರ್ಯಾಮಿಯೂ ಆದ ಪರಶಿವನನ್ನು ಸಾಕಾರ ಗೊಳಿಸಿ, ದೇಗುಲದಲ್ಲಿ ಸ್ಥಾಪಿಸಿ, ಮುಗಿಲೆತ್ತರದ ಗೋಪುರವನ್ನು ನಿರ್ಮಿಸಿ ದೇವರಿಂದ ದೂರ ನಿಂತು ಅರ್ಚಕನೊಬ್ಬನಿಂದ ಅರ್ಚಿಸುವ ಮಂದಭಕ್ತ, ವೀರಶೈವದ ಭಕ್ತಸ್ಥಲಕ್ಕೆ ಬಲುದೂರ. ನಿಸರ್ಗದ ಚಲುವಿನಲ್ಲಿ 'ಲಿಂಗಯ್ಯ' ನ ಲೀಲಾವಿನೋದವನ್ನು ಕಾಣುವ ಜ್ಞಾನ ಸಮನ್ವಿತವಾದ ಕಣ್ಣು ಜನಪದ ಕವಿಯ ಕಾರ್ಯದ ನಿಷ್ಠೆ.

ವೀರಶೈವಧರ್ಮದ ಬೇರು ಕಾಯಕ ಹೂವು ದಾಸೋಹ. ಆಧುನಿಕ ಜಗತ್ತಿನ ಸಮಸ್ಯಾತ್ಮಕ ಸಂಕೀರ್ಣ ಜೀವನಕ್ಕೆ ಶರಣ ಧರ್ಮದ ಈ ಕೊಡುಗೆ ತಾರಕ ಪರಿಹಾರ. ದಾಸೋಹ ತನು-ಮನಗಳಿಂದ ದುಡಿದು ತಂದ ಕಾಯಕದ ಫಲ. ಅದು ದಾನವಲ್ಲ, ದಾನಕ್ಕೂ ವ್ಯತ್ಯಾಸವಿದೆ. ದಾನಮಾಡುವ ಕ್ರಿಯೆಯಲ್ಲಿ ಮಾಡುವವರ ಅಂತಸ್ತು ಎತ್ತರದ್ದೆಂಬ ಅಂತಸ್ಥ ಅಹಂಭಾವವೊಂದು ಮಿಸುಗಾಡುತ್ತಿರುತ್ತದೆ. ಆದರೆ ದಾಸೋಹದಲ್ಲಿ ತನ್ನ ಗಳಿಕೆಯನ್ನು 'ಜಂಗಮ'ಕ್ಕೆ ಅರ್ಪಿಸುವ ಅರ್ಪಣಾ ಭಾವವಿರುತ್ತದೆ. ತ್ರಿವಿಧ ದಾಸೋಹ ವೀರಶೈವಧರ್ಮದಲ್ಲಿ ಕಾಣ ಬರುವ ವಿಶಿಷ್ಟಕ್ರಮ. ಗುರುವಿಗೆ ತನು, ಲಿಂಗಕ್ಕೆ ಮನ, ಜಂಗಮಕ್ಕೆ ಧನವನ್ನರ್ಪಿಸುವ ವಿಧಾನ ಅದರದ್ದು. ದಾಸೋಹ, ಕೇವಲಗಳಿಸಿದ ದ್ರವ್ಯವನ್ನು ಬಂದ ಜಂಗಮರಿಗೆ ಅರ್ಪಿಸುವುದೇ ಅಲ್ಲ, ಮಾಡಿದನೆಂಬುದು ಮನದಲ್ಲಿಹೊಳೆಯದೆ ಮಾಡುವಂಥಾದ್ದು. ದಾಸೋಹ ವೆಂದಾಕ್ಷಣ ಕಣ್ಣೆದುರು ನಿಲ್ಲುವ ಮಹಾಮೂರ್ತಿ ಬಸವಣ್ಣನವರು ದಾಸೋಹ ವಿಲ್ಲದೆ ಬಸವಣ್ಣ ನಿಲ್ಲ: ಬಸವಣ್ಣ ನಿಲ್ಲದೆ ದಾಸೋಹ ವಿಲ್ಲ. ಜನಪದದಲ್ಲಿ ನೆಲೆಸಿರುವ ಬಸವಣ್ಣ ರಾಜಕಾರಣಿ ಮಂತ್ರಿ ಬಸವಣ್ಣ ನಲ್ಲ. ಸಮಾಜ ಸುಧಾರಕ ಬಸವಣ್ಣ ನಲ್ಲ, ಸಕಲ ವಿದ್ಯಾ ಪಾರಂಗತ ಬಸವಣ್ಣ ಅಲ್ಲ, ದಾಸೋಹಿ ಬಸವಣ್ಣ.

ದಾಸೋಹಿ ಬಸವಣ್ಣ ದಾಸೋಹ ಕಲಿಸಿದನು
ದೇಶದೇಶಕೆಲ್ಲ ಕೇಳುತಲಿ । ಹೊಸಮಾತ
ಮಾಸಿದುವು ವೇದ ಹುಸಿಯೆಂದು ॥

ಬಸವಣ್ಣ ದಾಸೋಹಿ, ಕಲಿಸಿದ್ದು ದಾಸೋಹ, ಕಲಿತದ್ದು ದೇಶ ದೇಶವೆಲ್ಲ, ಕಲಿಸಿದ ಮಾತು "ಹೊಸಮಾತು" ದುಡಿದುದನ್ನು ಸಮಾಜಕ್ಕೆ ಹಂಚಿ ಉಣ್ಣು. "ಶಾಸ್ತ್ರ ಘನವೆಂಬೆನೆ? ಕರ್ಮವ ಭಜಿಸುತ್ತಿದೆ! ವೇದ ಘನವೆಂಬೆನೆ ಪ್ರಾಣಿವಧೆಯ ಹೇಳುತ್ತಿದೆ! ಸ್ಮೃತಿ ಘನವೆಂಬೆನೆ? ಮುಂದಿಟ್ಟರಸುತ್ತಿದೆ! ಅಲ್ಲೆಲ್ಲಿಯೂ ನೀವಿಲ್ಲದ ಕಾರಣ, ತ್ರಿವಿಧ ದಾಸೋಹದಲ್ಲಲ್ಲದೆ ಕಾಣಬಾರದು ಕೂಡಲ ಸಂಗಮ-



ದೇವನ!" ತ್ರಿವಿಧ ದಾಸೋಹದಲ್ಲಿ ದೇವನನ್ನು ಕಂಡರು ಬಸವಣ್ಣ. ಅವರಲ್ಲಿ ಅರ್ಪಣೆ, ಅನುಭಾವ ಹೆಪ್ಪುಗಟ್ಟಿದ ಕನ್ನಡ ನಾಡಿನ ಜನಪದರು ದಾಸೋಹವ ಸಿದ್ಧಿಯನ್ನು ಕಂಡರು.

ಅರ್ಪಣೆಯು ಅನುಭಾವ ಹೆಪ್ಪುಗಟ್ಟಿತು ಲೋಕ
ಬೆಪ್ಪಾತು ನಾಕಕಾಯಕದ ।ಹಾಲ್ಗೊಳೆಯ
ತೆಪ್ಪದಾಸೋಹ ತೇಲುತಲಿ॥

ಕಾಯಕದ ಸಿದ್ಧಿ ದಾಸೋಹದಲ್ಲಿ, ಷಟ್‌ಸ್ಥಲದ ಸಿದ್ಧಿ ದಾಸೋಹದಲ್ಲಿ, ಉಂಡು ತೇಗಿತು ಜಗತ್ತು. ಕಾಯಕ ಮತ್ತು ದಾಸೋಹಗಳು ಒಂದೇ ನಾಣ್ಯದ ಎರಡು ಮುಖಗಳು, ಆನಾಣ್ಯ ವೀರಶೈವ ಧರ್ಮ. ಜನಪದರವರೆಗೆ ಅದು ಇಳಿದು ಬಂದಿದ್ದರ ಫಲವಾಗಿ

ಉಂಡು ತೇಗಿತುಲೋಕ ಕೊಂಡಾಡಿಕಾಯಕವ
ಕಂಡ ಕಂಡಲ್ಲಿ ದಾಸೋಹ । ಕಾಯಕದ
ಕಂಡ ಜೀವನದ ಶಿವಮಾತು ॥

ಕಲ್ಯಾಣ ಕ್ರಾಂತಿಯ ಫಲವಾಗಿ 'ಶರಣ ಸಂಘಟನೆ' ಚದುರಿ ಹೋಯಿತಾದರೂ ಕಾಯಕ ಮತ್ತು ದಾಸೋಹದ ಪರಂಪರೆ ಮುದುರಿ ಹೋಗಲಿಲ್ಲ. ಇಂದಿಗೂ ವೀರಶೈವ ಮಠಗಳು ತಮ್ಮ ಹಿತಿ ಮಿತಿಯಲ್ಲಿ ದಾಸೋಹ ಪರಂಪರೆಯನ್ನು ಉಳಿಸಿಕೊಂಡೇ ಬಂದಿವೆ. ಅಲ್ಲದೆ ಆದಾಸೋಹ ಕೇವಲ ಗುರು, ಲಿಂಗ, ಜಂಗಮರಿಗೆ ಸೀಮಿತವಾಗದೆ, ಸಕಲ ಜೀವರಿಗೂ ತೆರೆದಿರುವ ಜ್ವಲಂತ ಸಾಕ್ಷಿಯಾಗಿ ಅನೇಕ ಮಠಗಳಿವೆ. ಇಂಥ ಮಠಗಳು ಸಹಮುಗ್ಧ ಜನಪದರ ಜೀವನದಲ್ಲಿ ಮಹತ್ತರವಾದ ಪ್ರಭಾವ, ಪರಿಣಾಮಗಳನ್ನು ಮಾಡಿವೆ. 'ಸಿದ್ಧಗಂಗೆಯ ಊಟ ಶಿವಗಂಗೆಯ ನೋಟ" ಎಂಬ ಗಾದೆ ಮಾತು ಶರಣಧರ್ಮದ ದಾಸೋಹಕ್ಕೆ ತೆರೆದ ಒಂದು ರಸಗವಾಕ್ಷವಾಗಿದೆ ಅನುಭವದ ರತ್ನಗನ್ನಡಿಯಾಗಿದೆ. ಗಾದೆಯೂ ಜನಪದ ಸಾಹಿತ್ಯದ ಒಂದು ಅವಿಭಾಜ್ಯ ಅಂಗವೆಂಬುದನ್ನು ಗಮನಿಸಿದಾಗ ವೀರಶೈವ ಧರ್ಮ ಜನಪದರ ಬದುಕಿನಲ್ಲಿ ಹೇಗೆ, ಹೇಗೆ ಬದುಕಿದೆ ಯೆಂಬುದನ್ನು ಕಾಣಬಹುದಲ್ಲವೇ ?

ಇಳಿಹಾಳ ಬೊಮ್ಮಯ್ಯ ಶಿವಶರಣ ಬೇಸಾಯ ಅವನ ಕುಲಕಸುಬ
ಇಳಿಹಾಳ ಬೊಮ್ಮಯ್ಯ ಹೊಲಗೆಲಸ ಕಾಯಕವ
ನಲುಮೆಯಲಿ ಮಾಡಿದಾಸೋಹ । ಹರಸೇವೆ
ಸಲಿಸಿ ಲಿಂಗದೊಳು ಬಯಲಾದ ॥

ಹೊಲಗೆಸ ಕಾಯಕವನ್ನು ಆತ್ಮಸಂತೋಷದಿಂದ ಮಾಡಿ ದಾಸೋಹ ನಡೆಸಿ ಹರಸೇವೆ ಸಲ್ಲಿಸಿ, ಲಿಂಗದೊಳು ಬಯಲಾದ, ಶರಣನಪರಿ ಇಂತಾದರೆ ಹೂಗಾರ ಮಾದಯ್ಯ

ಬಹಭಕ್ತ ಮಾದಯ್ಯ ಕಡು ಶರಣ ಕಾಯಕಕೆ
ದುಡಿದು ಶಿವಮತದ ದಾಸೋಹ । ನಡೆಸಿದ್ದ
ಪೊಡುಗೆರೆಯು ಗದ್ದೆ ಬೆಳೆದಂತೆ ॥

ದಾಸೋಹ ಗದ್ದೆ ಬೆಳೆದಂತೆ ನಡೆದಿತ್ತು ಎಂಬಲ್ಲಿ ಜನಪದ ಸಾಹಿತ್ಯದ ಸೊಗಡು ಶರಣ ಸಾಹಿತ್ಯದ ಸೊಮ್ಮು, ಘಮ ಘಮಿಸುವುದನ್ನು ಅನುಭವಿಸಬಹುದು. ಅತ್ತ ಮಕ್ಕಳ ಕೈಗೆ ತುತ್ತುರೊಟ್ಟೆ ಕೊಡದ ಧರ್ಮ ಧರ್ಮವಲ್ಲವೆಂಬುದನ್ನು ವೀರಶೈವ ಧರ್ಮ ಜನಪದದ ಹಾಡುಗಳ ಮೂಲಕ ಸಾದರ ಪಡಿಸುತ್ತಾ ಬಂದಿದೆ.

(ಮುಂದುವರಿಯುತ್ತದೆ)

# ಕರುಣಾಮೂರುತಿಗೆ

!ಎಂ.ಎ ನೀಲಾಂಬಿಕಾ, ಎಂ.ಎ, ಬಿ.ಇಡಿ.
242. ಉತ್ತರಾದಿ ಮಠದ ರಸ್ತೆ, ಮೈಸೂರು-570004.

ಕರುಣಾ ಮೂರುತಿ ಶ್ರೀ ಸಿದ್ಧಗಂಗೇಶ
ಪೀಠಕ್ಕೆ ಬಂದಾ।
ದೀನರ ದಲಿತರ ನೋವನು ಕಳೆಯೆ
ಸಂತಸದಿ ನಿಂದಾ ॥೧॥

ಅನ್ನವು ಬೇಕೆ ? ಜ್ಞಾನವು ಬೇಕೆ ?
ಹೇಳಿರಿ ನೀವೆಂದ।
ತ್ರಿವಿಧ ದಾಸೋಹ ನಡೆಸುತ ಜಗಕೆ
ನೆಮ್ಮದಿಯ ತಂದ ॥೨॥

ಜನತೆಯ ಬಡತನ ಅಜ್ಞಾನವನು
ತೊಲಗಿಸೆ ತಾನಿಂದ।
ಇಹಪರವೇಳಿಗೆ ಬಯಸುತಲೆಲ್ಲಡೆ
ನೆಮ್ಮದಿಯ ತಂದ ॥೩॥

ಸುಜ್ಞಾನ ಮೂರುತಿ ಶಿವಕುಮಾರರು
ಹೇಳಿದರೀ ಅಂದ।
ಕಾಯಕ ಮಾಡಿರಿ ಜೀವನ ನೆಮ್ಮದಿ
ಪಡೆವುದು ಅದರಿಂದ ॥೪॥

ಗುರುವಿನಿಂ ಸಾರ್ಥಕ ಪಡೆದ ಜನರು
ಹಾಡಿದರೀಗೆಂದು।
ಶ್ರೀ ಗುರು ವರ್ಯರು ಬಾಳಲಿ ಇನ್ನು
ನೂರ್ಕಾಲ ಎಂದು ॥೫॥



# ನಮಿಸು ಬಾ

ಅದೋ ನೋಡು ಬರುತಲಿದೆ ವಾತ್ಸಲ್ಯ ಮೂರ್ತಿಯು
ಸಿದ್ಧಪುರುಷರ ನಾಡಿಂ ಜನರಕಡೆಗೆ, ಭುವಿಯ
ಸ್ವರ್ಗವ ಮಾಡೆ ಪಥಿಕರನ್ನುದ್ಧರಿಸೆ, ತಾ
ಪಣತೊಟ್ಟು ಬಂದಿಲ್ಲಿ ನಿಂದಿಹುದು ನೋಡು.
ಮಮತೆಯಿಂದೆಲ್ಲಡೆ ಕರುಣೆದೃಷ್ಟಿಯ ಬೀರಿ,
ಕೋಟ್ಯಂತ ಜೀವಿಗಳ ಮನಕೆ ನೆಮ್ಮದಿತಂದು,
ದಾನವತೆ ಕೊನೆಗೊಳಿಸಿ. ಮಾನವತೆಯನ್ನುಳಿಸಿ,
ಜಾತಿ ಮತ ಭೇದಗಳ ಸಂಕಲೆಯ ಕಿತ್ತೊಗೆದು,
ಸುಜ್ಞಾನ ದೀಪ್ತಿಯನು ಎಲ್ಲಡೆ ಪಸರಿಸುತ,
ಶಾಂತಿ ಮಂತ್ರವ ಜಗಕೆ ಸಾರುತಿರೆ ಕೇಳು ಬಾ
ವಿಶ್ವದಾದ್ಯಂತದಲಿ ಇರುವ ಚೇತದ ಒಂದೆ.
ಅದಕೆ ನಮಿಸುತ ನೀವು ನೆಮ್ಮದಿಯಪಡೆಯಿರಿ,
ಎಂದು ಸಾರುತ ಬರುವ ದಿವ್ಯ ಚೇತನಕೀಗ.
ತಲೆಬಾಗಿ ನಮಿಸಲು ಬೇಗ ಬಾಮನುಜ !

# ವೀರ ವಿರಾಗಿಣಿ ಅಕ್ಕ ಮಹಾದೇವಿಯವರ ವೇದನೆ-ನಿವೇದನೆ.

-ಶ್ರೀ ಪ್ರೊ॥ S.S ಭೂಸರೆಡ್ಡಿ.

ಕನ್ನಡ ಸಾಹಿತ್ಯಲೋಕದ ಪ್ರಪ್ರಥಮ ಅನುಪಮ ಶ್ರೇಷ್ಠ ಕವಿಯಿತ್ರಿ ವೀರ ವಿರಾಗಿಣಿ ಅಕ್ಕಮಹಾದೇವಿ. ಆಕೆಯ ಉಜ್ವಲ ಇತಿಹಾಸ ರೋಮಾಂಚನಕಾರಿ ಆಕೆಯ ಸಾಧನೆ ಸಿದ್ಧಿಯೂ ವಿಕ್ರಮ. ಈ ಉದಾತ್ತ ಚೇತನದ ಹಿರಿಯ ಹಂಬಲ ಸಕಲ ಜೀವಿಗಳಿಗೆ ಲೇಸನೇಬಯಸುವದಾಗಿದೆ. ಜಗತ್ತಿನಲ್ಲಿ ದೇವನನ್ನೇ ಗಂಡನನ್ನಾಗಿ ಮಾಡಿಕೊಂಡ ಉದಾಹರಣೆ ವಿರಳ. ಈ ಅಪರೂಪದ ವಿರಳ ಪಂಕ್ತಿಗೆ ಸೇರಿದವಳು ಜ್ಞಾನದ ಖಣಿ, ಪುಣ್ಯದ ಪುತ್ಥಳಿ ಅಕ್ಕಮಹಾದೇವಿ. ಓರ್ವ ಸಾಧಾರಣ ಮನೆತನದ ಹೆಣ್ಣುಮಗಳು ಮನಸ್ಸು ಮಾಡಿದರೆ ಏನನ್ನು ಸಾಧಿಸಬಹುದೆಂಬುದಕ್ಕೆ ಅಕ್ಕಮಹಾದೇವಿಯ ಜೀವನ ಒಂದು ಜ್ವಲಂತ ನಿದರ್ಶನ. ಆಕೆಯ ಕಾಯಕವೇ ಕಾಶಿ, ಒಡಲೇ ಕೇದಾಗ, ನುಡಿದುದೇ ಮುತ್ತಿನ ಹಾರ, ನಕೆದುದೇ ಮಹಾಮಾರ್ಗ

ಸುತ್ತಿ ಸುತ್ತಿ ಬಂದತಿಲ್ಲ
ಲಕ್ಷ ಗಂಗೆಯ ಮಿಂದದಿಲ್ಲ
ತುಟ್ಟ ತುದಿಯ ಮೇರುಗಿರಿಯ
ಮೆಟ್ಟಿ ಕೂಗಿದಡಿಲ್ಲ
ನಿಚ್ಚಕ್ಕೆ ಮನವನಂದಂದಿಗೆ
ಅತ್ತಿತ್ತ ಹರಿಯಲೀಯದೆ
ಚಿತ್ತದಲ್ಲಿ ಧರಿಸ ಬಲ್ಲಡೆ
ಬಚ್ಚ ಬರಿಯ ಬೆಳಗು ಅಮರೇಶ್ವರ ಲಿಂಗವು.

ಎಂದ ವ್ಯೋಮ ಮೂರುತಿ ಅಲ್ಲಮಪ್ರಭುದೇವರ ವಚನದಂತೆ ಅಕ್ಕನ ಪಾವನ ಜೀವನ ಚೇತೋಹಾರಿ. ಬಚ್ಚ ಬರಿಯ ಬೆಳಗು ಸಾಧಿಸಿದ ಧೀಮಂತೆ, ಹೃದಯ ಶ್ರೀಮಂತೆ, ಮಾನವಕುಲ ಪಾವನ ಮಾಡಿದ ಲೋಕಾನುಭವಿ; ಶಿವಾನುಭವಿ; ಮಹಾನುಭಾವಿ. ಆಕೆಯ ವೀರನಿಷ್ಠೆ, ವೈಚಾರಿಕ ಸ್ವತಂತ್ರ ನಿಶಿತಮತಿ ಅಪ್ರತಿಮವಾದುದು; ಅದ್ಭುತವಾದುದು.



"ಕಾಮನ ಗೆಲಿದೆನು ಬಸವಾ
ನಿಮ್ಮ ದಯದಿಂದ
ಸೋಮಧರನ ಹಿಡಿತಪ್ಪೆನು ಬಸವಾ
ನಿಮ್ಮ ಕೃಪೆಯಿಂದ
ನಾಮದಲ್ಲಿ ಹೆಂಗಸೆಂಬ ಹೆಸರಾದರೇನು
ಭಾವಿಸಲು ಗಂಡುರೂಪು
ಬಸವಾ ನಿಮ್ಮ ದಯದಿಂದ
ಅತಿಕಾಮಿ ಚನ್ನ ಮಲ್ಲಿಕಾರ್ಜುನಯ್ಯಂಗೆ
ತೊಡರನಿಕ್ಕಿ ಎರಡು ಪರಿಯದೆ
ಕೂಡಿದೆನು ಬಸವಾ ನಿಮ್ಮದಯದಿಂದ ॥

ಆದುದರಿಂದ ಆಕೆಯ ಬದುಕೆ ಒಂದು ಮಹಾಕಾವ್ಯ. ಅಂತೆಯೆ ಅಕ್ಕ-
ಮಹಾದೇವಿಯನ್ನು ಹಾಕಿ ಹರಿಸಿದಷ್ಟು ಮತ್ತಾರನ್ನೂ ನಮ್ಮವರು ಹೊಗಳಿಲ್ಲ,
ಸ್ತುತಿಸಿಲ್ಲ, ಆಕೆಯ ಕೀರ್ತಿ ಪತಾಕೆಯನ್ನು ಎತ್ತಿ ಹಿಡಿದವರೇ ಇಲ್ಲವೆಂದರೆ
ತಪ್ಪಾಗಲಾರದು. ಆಕೆಯು ನುಡಿಗಿಂತ ನಡೆಗೆ, ವಿಚಾರಕ್ಕಿಂತ ಆಚಾರಕ್ಕೆ ಬುದ್ಧಿಗಿಂತ
ಭಾವಕ್ಕೆ, ತರ್ಕಕ್ಕಿಂತ ಅನುಭಾವಕ್ಕೆ ಕುಲಕ್ಕಿಂತ ಶೀಲಕ್ಕೆ ಹೆಚ್ಚಿನ ಪ್ರಾಶಸ್ತ್ಯವಿತ್ತವಳು.
ಎಂತಹ ಕಷ್ಟ ನಿಷ್ಟುರಗಳು ಅಡರಿಸಿ ಬಂದರೂ ತನ್ನ ಉದಾತ್ತ ಧ್ಯೇಯದಿಂದ
ವಿಚಲಿತಳಾಗದ ಜಿಗುಟುತನ ನ್ಯಾಯ ನಿಷ್ಠುರತೆ, ನಿರ್ದಾಕ್ಷಿಣ್ಯ ಸ್ವಭಾವ ಮೈವೆ-
ತ್ತಿನಿಂತಿತ್ತು; ಮೈದಾಳಿ ನಿಂತಿತು, ಅಕ್ಕನ ಪ್ರತಿಭಾನ್ವಿತ ವ್ಯಕ್ತಿತ್ವದಲ್ಲಿ, ಆದುದರಿಂದ
ಮಹಾದೇವಿಯಕ್ಕನ ಜೀವನ ವಿಶ್ವದ ಇತಿಹಾಸದಲ್ಲಿಯೇ ಉಜ್ವಲವಾಗಿದೆ. ಆಕೆಯ
ಜೀವನವೇ ಒಂದು ಮಹಾ ಕಾವ್ಯ. ಜಗದ ಜನವನ್ನು ಉದ್ಧರಿಸಬಲ್ಲ ಕಾವ್ಯ.
ಆಕೆಯ ಬಗೆಗೆ ವಿಪುಲವಾದ ಸಾಹಿತ್ಯ ಸೃಷ್ಟಿಯಾಗಿರುವುದು ಭುವನದ ಮಹಾ
ಭಾಗ್ಯವೆಂದೇ ಭಾವಿಸಲೇಬೇಕಾಗಿದೆ.

ಹನ್ನೆರಡನೆಯ ಶತಮಾನದ ಇತಿಹಾಸವನ್ನು ಸ್ವಲ್ಪ ಸ್ಥೂಲವಾಗಿ ಪರಿಶೀಲಿಸಿದರೆ
ಕಲ್ಯಾಣ, ಸೊಲ್ಲಾಪುರ, ಬಳ್ಳಿಗಾವಿ ಮೂರು ಮಹತ್ವದ ವೀರಶೈವ ಧರ್ಮದ
ಕೇಂದ್ರಗಳಾಗಿದ್ದವು. ಶಿವಶರಣರ ಸಂಸ್ಕರಣೆಯ ತಾಣಗಳಾಗಿದ್ದವು ಹಾಗೆಯೇ ಬಳ್ಳಿ-
ಗಾವೆ ಪ್ರಾಂತಕ್ಕೆ ಅನಿತದೂರದಲ್ಲಿ ಈಗಿನ ಶಿಕಾರಿ ಪುರ ತಾಲ್ಲೂಕಿನ ಶಿರಾಳಕೊಪ್ಪ
ದಿಂದ ಎಂಟು ಕಿಲೋಮೀಟರ್‌ದಲ್ಲಿ ಉಡತಡಿಯೇ ಅಕ್ಕನ ಜನ್ಮಸ್ಥಳ. ಆಕೆಯ
ತಂದೆಯ ಹೆಸರು ಓಂಕಾರ ಸೆಟ್ಟಿ, ತಾಯಿಯು ಲಿಂಗಮ್ಮ ನೆಂದು ಸಾರಿದ ರಾಚ-
ಕವಿಯ ಕಾವ್ಯವನ್ನೇ ಹೆಚ್ಚು ಸಂಭವನೀಯವೆಂದು ಹೇಳಲಾಗಗುತ್ತಿದ್ದರೂ ನಿರ್ಮಲ
ಸುಮತಿಯರೇ. ಆಕೆಯ ತಂದೆ ತಾಯಿಗಳೆಂದು ಪರಿಭಾವಿಸಿದರೆ ತಪ್ಪೇನಿಲ್ಲ.

ಈ ಹೆಸರುಗಳು ಈಗಾಗಲೇ ಮನೆ ಮಾತಾಗಿದೆ; ಜನಜನಿತವಾಗಿವೆ. ಕಾರಣಿಕ ಶಿಶುವಾಗಿ ಜನಿಸಿದ ಮಹಾದೇವಿ ನೋಡುವವರ ಕಣ್ಣ ಪುಣ್ಯ, ಪಾಡುವರ ಜಿಹ್ವಾಮೃತವಾಗಿದ್ದಳೆಂದು ಕಾವ್ಯಗಳು ಹಾಡಿಕೊಂಡಿವೆ. ಶಿವಜ್ಞಾನ ಸಂಪನ್ನೆ, ಸಾಹಿತ್ಯನಿಧಿ ಸಕಲಕಲಾ ಕೋವಿದೆ ಮಣಿಯಾಗಿ ಮಹಾದೇವಿ ಸೌಂದರ್ಯದ ಖಣಿಯಾಗಿ ಚೆಲುವಿನ ರಾಸಿಯಾಗಿ ಬೆಳೆದಳು. ಗುರುಲಿಂಗದೇವನ ಕೃಪೆಯಾಗಿ ಭಕ್ತಿ ಜ್ಞಾನ ವೈರಾಗ್ಯ ಸಂಪನ್ನೆಯಾದಳು. ಸಹಜವಾದ ವೈರಾಗ್ಯವು ಬೆಳೆಯಿತು. ಶಿವಾಚಾರ ಸಂಪನ್ನರೂ, ಗುರುಲಿಂಗ ಜಂಗಮ ಸೇವಾ ನಿರತರಾದ ತಂದೆ ತಾಯಿಗಳು ಮಹಾದೇವಿಯ ಲಗ್ನ ಮಾಡುವ ತವಕ ಹೆಚ್ಚಾಗಿತ್ತು. ಆದರೆ ಕೌಶಿಕನ ಹದ್ದಿನ ಕಣ್ಣು ಮಹಾದೇವಿಯ ಮೇಲೆ ಬಿತ್ತು. ಅದೊಂದು ವ್ಯಥೆಯ ಮಹಾಕಥೆ. ಮಹಾದೇವಿಯಕ್ಕನ ಸಮಗ್ರ ಜೀವನ ಪರಿವರ್ತನೆಗೆ ಪ್ರಚೋದಕವಾಯಿತು. ಆದದ್ದೆಲ್ಲ ಒಳಿತೇ ಆಯಿತು. ಅಲ್ಲಿಂದಲೇ ತನ್ನ ವೇದನೆಯನ್ನು ಅತ್ಯಂತ ಮನೋ ವೇಧಕವಾಗಿ ವಚನಗಳ ಮೂಲಕ ಅರ್ಥಪೂರ್ಣವಾಗಿ ಅಭಿವ್ಯಕ್ತ ಪಡಿಸಿದ್ದಾಳೆ. ಆಕೆಯ ಯಾವುದೇ ವಚನವನ್ನು ತೆಗೆದುಕೊಂಡರೂ ಅಲ್ಲಿ ಮಾತ್ಸರ್ಯವಿಲ್ಲ. ಈ ನಿರಾಳವಾದ ತೆರೆದ ಹೃದಯವನ್ನು ಕಾಣುತ್ತೇವೆ. ಆಕೆಯ ವಚನಗಳು ನೊಂದ ಬೆಂದ ಜೀವನಕ್ಕೆ ಚೇತನವನ್ನೀಯುವ ಸಂಜೀವನ ಮಂತ್ರವಾಗಿವೆ. ಹೃದಯವೇ ಪರಿಶುದ್ಧವಾದ ಬಳಿಕ ಚಿಂತಿಸುವ ಕಾರಣವಿಲ್ಲವೆಂಬುದನ್ನು ಅದೆಷ್ಟು ಸೊಗಸಾಗಿ ಈ ವಚನದಲ್ಲಿ ಪಡಿ ಮೂಡಿದೆ; ನೋಡಿ.

" ಉಸುರಿನ ಪರಿಮಳವಿರಲು ಕುಸುಮದ ಹಂಗೇಕಯ್ಯ ?
ಕ್ಷಮೆ, ದಮೆ, ಶಾಂತಿ, ಸೈರಣೆಯಿರಲು ಸಮಾಧಿಯ ಹಂಗೇಕಯ್ಯ ?
ಲೋಕವೆ ತಾನಾದ ಬಳಿಕ ಏಕಾಂತದ ಹಂಗೇಕಯ್ಯ
ಚನ್ನ ಮಲ್ಲಿಕಾರ್ಜುನಾ ||

ಅಂತೆಯೇ

ತನುಕರಗದವರಲ್ಲಿ ಮಜ್ಜನವ ನೊಲ್ಲೆಯಯ್ಯಾ ನೀನು
ಮನ... —......... ಪುಷ್ಪವ...................—
ಹದುಳಿಗರಲ್ಲದವರಲ್ಲಿ ಗಂಧಾಕ್ಷತೆಯ ನೊಲ್ಲೆ...................
ಅರಿವು ಕಣ್ದೆರೆಯದವರಲ್ಲಿ ಆರತಿಯ— — — — ....
ಭಾವಶುದ್ಧ ವಿಲ್ಲದವರಲ್ಲಿ ಧೂಪವ...........——
ಪರಿಣಾಮ ಗಳಿಲ್ಲದದರಲ್ಲಿ ನೈವೇದ್ಯವೆ....——....
ತ್ರಿಕರಣ ಶುದ್ಧವಿಲ್ಲದವರಲ್ಲಿ ತಾಂಬೂಲವ............
ಹೃದಯಕಮಲ ಅರಳದವರಲ್ಲಿ ಇರ ಲೊಲ್ಲೆಯಯ್ಯಾ ನೀನು
ಎನ್ನಲ್ಲಿ ಏನುಂಟೆಂದು ಕರಸ್ಥಳವ ನಿಂಬುಗೊಂಡೆ
ಹೇಳಾ ಚನ್ನ ಮಲ್ಲಿಕಾರ್ಜುನಯ್ಯ "



ವಿಶ್ವ ಸಂಸ್ಕೃತಿಯ ಪರಿಮಳವೇ ಈ ವಚನದಲ್ಲಿ ಸೂಸಿ ನಿಂತಿದೆ. ಮಾನವತೆಯೆ ಮಂದಾರವೇ ನೈವೆತ್ತಿದೆ. ಮೈದಾಳಿದೆ. ದಯಾಮಯಾ, ಅಂತಃಕರುಣೆ, ಪ್ರೀತಿ ವಿಶ್ವಾಸಗಳ ಅವಶ್ಯಕತೆಯನ್ನು ಬಿಂಬಿಸುತ್ತದೆ.

ಜೀವನದಲ್ಲಿ ಬರುವ ಅಡೆತಡೆಗಳಿಗೆ ನೋವು ಸಾವುಗಳಿಗೆ ಹೆದರಬಾರದು, ಬೆದರಬಾರದು ಎಂಬುದನ್ನು ನಿವೇದಿಸಿದ ಈ ವಚನ ಮನೋಹಾರಿ,

" ಹೆದರದಿರು ಮನವೆ, ಬೆದರದಿರು ತನುವೆ
ನಿಜವನರಿತು ನಿಶ್ಚಿಂತನಾಗಿರು
ಫಲವಾದ ಮರನ ಇಡುವರೊಬ್ಬರ ಕಾಣೆ
ಭಕ್ತಿಯುಳ್ಳವರ ಬೈವರೊಂದು ಕೋಟಿ,
ಭಕ್ತಿಯಿಲ್ಲದವರ ಬೈವರೊಬ್ಬರ ಕಾಣೆ
ನಿಮ್ಮ ಶರಣರ ನುಡಿಯೆ ಎನಗೆ ಗತಿ, ಸೋಪಾನ,
ಚನ್ನಮಲ್ಲಿಕಾರ್ಜುನಾ.

ಬದುಕಿನ ಬೇರುಗಳೇ ಸಡಿಲಾಗುತ್ತಿರುವ ಇಂದಿನ ಸಂದಿಗ್ಧ ಸಂಕಟ ಸಂದರ್ಭದಲ್ಲಿ ಈ ಬಗೆಯ ಆಶೆಯ ಜ್ಯೋತಿಯನ್ನು ಹೊತ್ತಿಸಿದ ಮಾನವೀಯ ಚಿರಂತನ ಮೌಲ್ಯಗಳನ್ನು ಎತ್ತಿ ಹಿಡಿದ ಈ ವಚನದಲ್ಲಿ ಅಪಾರ ಅನುಭವದ ಅಮೃತವೇ ತುಂಬಿ ನಿಂತಿದೆ. ಆಕೆಯ ಕೆಚ್ಚು ನಿಷ್ಠುರ ನುಡಿ ಲೋಕವನ್ನೇ ಅಚ್ಚರಿಗೊಳಿಸುವಂಥದಾಗಿದೆ. ಆಕೆಯದು ಅನುಭವ ಪ್ರಮಾಣ್ಯ ಸಾಹಿತ್ಯ ಸಂಗಮ.

" ವೇದ ಶಾಸ್ತ್ರ ಆಗಮ ಪುರಾಣಂಗಳೆಲ್ಲವೂ
ಕೊಟ್ಟಣವ ಕುಟ್ಟಿದ ನುಚ್ಚು ತೌಡು ಕಾಣಿಭೋ !
ಇವಕುಟ್ಟಲೇಕೆ ? ಕುಸುಕಲೇಕೆ ?
ಅತ್ತಲಿತ್ತ ಹರಿವ ಮನದ ಶಿರವ ಸರಿದಡೆ
ಬಚ್ಚ ಬರಿಯ ಬಯಲು ಚನ್ನಮಲ್ಲಿಕಾರ್ಜುನ "

ಮಾನವೀಯ ಚಿರಂತನ ಮೌಲ್ಯಗಳ ಆಗರ; ಅನುಭವಗಳ ಸಾಗರವಾಗಿರುವ ಈ ವಚನ ಇಂದಿಗೂ ಪ್ರಸಕ್ತವಾಗಿದೆ.

" ಬೆಟ್ಟದ ಮೇಲೊಂದು ಮನೆಯು ಮಾಡಿ
ಮೃಗಗಳಿಗಂಜಿದಡೆಂತಯ್ಯಾ?
ಸಮುದ್ರದ ತಡಿಯಲೊಂದು ಮನೆಯ ಮಾಡಿ

ನೊರೆ ತೆರೆಗಳಿಗಂಜಿದಡೆಂತಯ್ಯ ?
ಸಂತೆಯೊಳಗೊಂದು ಮನೆಯ ಮಾಡಿ
ಶಬ್ದಕ್ಕೆ ನಾಚಿದಡೆಂತಯ್ಯ ?
ಚನ್ನಮಲ್ಲಿಕಾರ್ಜುನ ದೇವ ಕೇಳಯ್ಯಾ
ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿ ನಿಂದೆಗಳು
ಬಂದಡೆ ಸಮಾಧಾನಿಯಾಗಿರ್ಪುದು "

'ಮಾನವ ಜನ್ಮ ದೊಡ್ಡದು ಹುಚ್ಚಪ್ಪಗಳಿರಾ' ಅದನ್ನು ಕೆಡಿಸಿಕೊಳ್ಳ ಬೇಡಿ ಎಂದ ದಾಸವಾಣಿಯಂತೆ ಇಂದೊಂದು ಮಹಾದೇವನು ಅನುಗ್ರಹಿಸಿದ ಪ್ರಸಾದ ಕಾಯ ವೆಂದು ಶರಣರವಾಣಿ ಸಾರುತ್ತದೆ. ಎಂಭತ್ತು ಕೋಟಿ ಜೀವರಾಶಿಗಳಲ್ಲಿ ಅತ್ಯಂತ ಶ್ರೇಷ್ಠ ಪ್ರಾಣಿ ಮಾನವ. ಮಾನವ ಜನ್ಮದಲ್ಲಿ ಹುಟ್ಟಿ ಬಂದ ಮೇಲೆ ಅದನ್ನು ಸಾರ್ಥಕ ಪಡಿಸಿಕೊಳ್ಳಬೇಕು. ಮುಕ್ತಿಯ ಮಹಾಮಾರ್ಗದತ್ತ ಸಾಗಬೇಕು. ಈ ದಿಸೆಯಲ್ಲಿ ನಾವು ಅಳವಡಿಸಿಕೊಳ್ಳ ಬೇಕಾದ ಅವಶ್ಯ ಗುಣ-ಗಳನ್ನು ಈ ವಚನದಲ್ಲಿ ನಿವೇದಿಸಲಾಗಿದೆ.

'ಮರವಿದ್ದು ಫಲವೇನು ನೆಳಲಿಲ್ಲದನ್ನಕ್ಕ
ಧನವಿದ್ದು ಫಲವೇನು ದಯವಿಲ್ಲದನ್ನಕ್ಕ
ಹಸುವಿದ್ದು ಫಲವೇನು ಹಯನಿಲ್ಲದನ್ನಕ್ಕ
ರೂಪಿದ್ದು ಫಲವೇನು ಗುಣವಿಲ್ಲದನ್ನಕ್ಕ
ನಾನಿದ್ದು ಫಲವೇನು ನಿಮ್ಮ ಜ್ಞಾನವಿಲ್ಲದನ್ನಕ್ಕ
ಚನ್ನಮಲ್ಲಿಕಾರ್ಜುನ.'

ಅರಿವೇ ಗುರು; ಆದುದರಿಂದ ಅರಿದರೆ ಶರಣ, ಮರೆದರೆ ಮಾನವ. 'ಅನುಭಾವವೆಂಬುದು ಅಂತರಂಗದ ರತ್ನ; ಆತ್ಮವಿದ್ಯೆ. ಇತ್ಯಾದಿ ವಿಚಾರಗಳನ್ನು ಆ ಮಾನವನು ತಿಳಿದುಕೊಳ್ಳ ಬೇಕೆಂಬುದನ್ನು ಮೇಲಣ ವಚನದಲ್ಲಿ ಎಲ್ಲರಿಗೂ ಸುಲಭವಾಗಿ ವಿವರಿಸಲಾಗಿದೆ. ಇಲ್ಲಿ ಅಕ್ಕಮಹಾದೇವಿಯ ಲೋಕಾನುಭವವೇ ಶಿವಾನುಭವವಾಗಿ ರೂಪು ಗೊಂಡಿದೆ; ಹೆಪ್ಪುಗೊಂಡಿದೆ ನಾವು ಇಂದು ಕಾಣುವ ಕನಸುಗಳೇ ಬೇರೆ. ಅಕ್ಕನು ಕಂಡ ಸುಂದರವಾದ ಕನಸು ಹೀಗಿದೆ;

"ಅಕ್ಕ ಕೇಳಾ, ಅಕ್ಕಯ್ಯ ನಾನೊಂದು ಕನಸಕಂಡೆ
ಅಕ್ಕಿ ಅಡಕೆ ತೆಂಗಿನಕಾಯಿಕಂಡೆ
ಚಿಕ್ಕ ಚಿಕ್ಕ ಜಡೆಗಳ ಸುಲಿಪಲ್ಲ ಗೊರವನು
ಭಿಕ್ಷಕ್ಕೆ ಮನೆಗೆ ಬಂದುದ ಕಂಡೆನವ್ವಾ
ಮಿಕ್ಕು ಮೀರಿ ಹೋಹನ ಬೆಂಬತ್ತಿ ಕೈವಿಡಿದೆನು
ಚೆನ್ನ ಮಲ್ಲಿಕಾರ್ಜುನನ ಕಂಡು ಕಣ್ದೆರೆದೆ.



ಭಾವದ ಬೆನ್ನೇರಿ ಬಂದ ಹೊಂಗನಸನ್ನು ಮಹಾದೇವಿಯಕ್ಕ ಅದೆಷ್ಟು ಪರಿಣಾಮ ರಮಣೀಯವಾಗಿ ಬಿತ್ತರಿಸಿದ್ದಾಳೆ. ಆಧ್ಯಾತ್ಮದ ತೇಜಸ್ಸು ದಳವೇರಿದೆ. ಹೃದಯವನ್ನು ಅರಳಿಸುತ್ತಿದೆ; ಸುಜ್ಞಾನದ ಸೋಪಾನವನ್ನು ತೋರಿದೆ.

"ಬಂಜೆ ತಾಯಿಯ ಬೇನೆಯನರಿವಳೆ?
ಬಲದಾಯಿ ಮುದ್ದು ಬಲ್ಲಳೆ?
ನೊಂದವರ ನೋವ ನೋಯದವರೆತ್ತ ಬಲ್ಲರೊ?
ಚನ್ನಮಲ್ಲಿಕಾರ್ಜುನಯ್ಯನಿಂದಲಗು
ಒಡಲಲ್ಲಿ ಮುರಿದು ಹೊರಳುವೆನ್ನಳಲನು
ನೀವೆತ್ತ ಬಲ್ಲಿರೆ ಎಲೆ ತಾಯಿಗಳಿರಾ?"

ಲಿಂಗಾಂಗ ಸಾಮರಸ್ಯದ ಹಿತಮಿತ ವಿಚಾರಗಳನ್ನು ಹೇಳುವ ಪರಿಇದು. ಸರ್ಪಭರಿತನಾದ ದೇವನನ್ನು ಕಂಡಾಗಲೇ ಆಕೆಗೆ ಸಮಾಧಾನ.

"ವನವೆಲ್ಲಾ ಕಲ್ಪತರು. ಗಿಡವೆಲ್ಲಾ ಮರುಜೀವಣಿ
ಶಿಲೆಗಳೆಲ್ಲಾ ಪರುಷ ನೆಲವೆಲ್ಲಾ ಅವಿಮುಕ್ತ ಕ್ಷೇತ್ರ
ಜಲವೆಲ್ಲಾ ನಿರ್ಜರಾಮೃತ, ಮೃಗವೆಲ್ಲಾ ಪರುಷಮೃಗ
ಎಡರುವ ಹರಳೆಲ್ಲಾ ಚಿಂತಾಮಣಿ
ಚನ ಮಲ್ಲಿಕಾರ್ಜುನಯ್ಯನ ನಚ್ಚಿನ ಗಿರಿಯ ಸುತ್ತಿ ನೋಡುತ ಬಂದು
ಕದಳಿಯ ಬನವ ಕಂಡೆ ನಾನು."

ಕದಳಿ ಬನದಲ್ಲಿ ಒಂದಾದ ಪರಿ ಬಹು ಸೊಗಸಾಗಿದೆ. ಸರ್ವಾರ್ಪಣಾ ಭಾವ ಈ ವಚನದಲ್ಲಿದೆ. 'ಮರಣವೇ ಮಹಾನವಮಿ ಎನ್ನುವ ಮಾತಿಗೆ ಈ ವಚನ ಸಾಕ್ಷಿ ಎಂತಹ ಸಂಕಲಗಳು ಬಂದರೂ ನಾನು ಹೆದರುವುದಿಲ್ಲ ಎನ್ನುವ ಧೈರ್ಯದ ಸ್ಥೈರ್ಯದ ಮಾತುಗಳಿವು:

"ಕಿಡಿಕಿಡಿ ಕೆದರಿದಡೆ ಎನಗೆ ಹಸಿವು ತೃಷೆಯುಡಗಿತೆಂಬೆನು.
ಮುಗಿಲು ಹರಿದು ಬಿದ್ದಡೆ ಎನಗೆ ಮಜ್ಜನಕ್ಕೆರೆದರೆಂಬೆನು
ಗಿರಿಮೇಲೆ ಬಿದ್ದಡೆ ಎನ್ನರೆ ಪುಷ್ಪವೆಂಬೆನು
ಚನ್ನಮಲ್ಲಿಕಾರ್ಜುನಾ"

ಶಿರಹರಿದು ಬಿದ್ದರೆ ಪ್ರಾಣ ನಿನಗರ್ಪಿತವೆಂಬೆನು ಭೌತಿಕ ಹವ್ಯಾಸದ ಬೆನ್ನು ಹತ್ತಿದ ಬಾಳಿನ ಗೋಳಿನ ವ್ಯಥೆಯ ಕಥೆಯನ್ನು ಈ ವಚನ ಸಾರಿ ಹೇಳುತ್ತಿದೆ.

ಹಗಲು ನಾಲ್ಕು ಜಾವ ಅಶನಕ್ಕೆ ಕುದಿವರು
ಇರುಳು ನಾಲ್ಕು ಜಾವ ವ್ಯಸನಕ್ಕೆ ಕುದಿವರು
ಅಗಸ ನೀರೊಳಗಿರ್ದುಬಾಯಾರಿ ಸತ್ತಂತೆ.

ತಮ್ಮೊಳಗಿರ್ದ ಮಹಾಘನವರಿನಯರು ಚನ್ನಮಲ್ಲಿಕಾರ್ಜುನ ನಿನ್ನೊಡವೆ ಎನ್ನುವುದು ನಿನ್ನಂತರಂಗದ ಜ್ಞಾನ ನೋಡಾ। ಎಂಬ ಪ್ರಭುದೇವರ ವಚನವನ್ನು ಮೇಲಿನ ವಚನ ನೆನಪಿಗೆ ತರುವಂತಿದೆ

"ಹುಟ್ಟಿದೆ ಶ್ರೀ ಗುರುವಿನ ಹಸ್ತದಲ್ಲಿ
ಬೆಳೆದೆನು ಅಸಂಖ್ಯಾತರ ಕರುಣದೊಳಗೆ
ಭಾವವೆಂಬ ಹಾಲು, ಸುಜ್ಞಾನವೆಂಬ ತುಪ್ಪ
ಪರಮಾರ್ಥವೆಂಬ ಸಕ್ಕರೆಯನಿಕ್ಕಿದರು ನೋಡಾ
ಇಂತಿಪ್ಪ ತ್ರಿವಿಧಾಮೃತವಣ ದಣಿಯರೆರೆದು ಸಲುಹಿದರೆನ್ನ
ವಿವಾಹವ ಮಾಡಿದಿರಿ. ಸಯವಪ್ಪ ಗಂಡಂಗೆ ಕೊಟ್ಟಿರಿ
ಕೊಟ್ಟ ಮನೆಗೆ ಕಳುಹಲೆಂದು ಅಸಂಖ್ಯಾತರೆಲ್ಲರೂ ನೆರೆದು ಬಂದಿರಿ.
ಬಸವಣ್ಣ ಮೆಚ್ಚಲು ಒಗೆತನವ ಮಾಡುವೆ
ಚೆನ್ನಮಲ್ಲಿಕಾರ್ಜುನನ ಕೈವಿಡಿದು
ನಿಮ್ಮ ತಲೆಗೆ ಹೂವ ತರುವೆನಲ್ಲದೆ ಹುಲ್ಲ ತಾರೆನು
ಅವಧರಿಸಿ ನಿಮ್ಮಡಿಗಳೆಲ್ಲರೂ ಮರಳಿ ಬಿಜಯಂಗೈವುದು ಶರಣಾರ್ಥಿ."

ಎನ್ನುವ ಆಕೆಯ ನಿವೇದನೆ ಹೃಯಂಗಮವಾಗಿದೆ. ಕನ್ನಡ ನಾಡಿನ ಕೀರ್ತಿ ಕುಸುಮವನ್ನು ಜಗತ್ತಿನಾದ್ಯಂತ ಹರಡಿದ ಕೀರ್ತಿ ಅಕ್ಕಮಹಾದೇವಿಯದು. ಇಂಥ ದಿವ್ಯ ರತ್ನವನ್ನು ಪಡೆದ ನಾಡು ಧನ್ಯ. ಮಾನ್ಯ.

---





# ಬಸವ ಚರಿತ್ರೆ

ಶ್ರೀ ಬಿ. ಹೆಚ್. ದೇಸಾಯಿ, ಸಂಪಾದಕರು, ಶರಣಧರ್ಮ,ವಾರ ಪತ್ರಿಕೆ,
ಹಳಿಯಾಳ, ಉತ್ತರಕನ್ನಡ ಜಿಲ್ಲೆ

ಬುದ್ಧ ಭಗವಾನನು ಭಿಕ್ಷುಗಳ ಮೂಲಕ ತನ್ನ ಮತವನ್ನು ಹೇಗೆ ದೇಶಗಳಲ್ಲೆಲ್ಲಾ ಪ್ರಸಾರಗೊಳಿಸಿದನೋ ಹಾಗೆಯೇ ಬಸವಣ್ಣನವರೂ ಕೂಡ ಜಂಗಮ ಮೂರ್ತಿಗಳಿಂದಲೇ ವೀರಶೈವ ಮತವನ್ನು ಪ್ರಸಾರಗೊಳಿಸಿದ್ದಾರೆಂದು ಹೇಳಬಹುದು. ಆದರೆ ಈ ಕಾರ್ಯವು ಆ ಮಹಾನುಭಾವರಿರುವಾಗಲೇ ಹೆಚ್ಚಾಗಿ ಜರುಗಲಿಲ್ಲ. ಕಲ್ಯಾಣದಲ್ಲಿ ರಾಜ್ಯಕ್ರಾಂತಿಯಾದ ನಂತರ ಅಲ್ಲಿಂದ ನಾನಾ ಭಾಗಗಳಿಗೆ ಹೋದ ಅಸಂಖ್ಯ ಜಂಗಮರೇ ಮುಂದೆ ಈ ಮತವನ್ನು ಪ್ರಸಾರಗೊಳಿಸಿದರು. ಜಂಗಮರು ತಾವು ಕಲ್ಯಾಣದಿಂದ ಬಂದವೆಂದು ಹೇಳಿಕೊಳ್ಳುವ ರೂಢಿಯು ಈಗಲೂ ಕೂಡ ವಿಶೇಷವಾಗಿಯೇ ಇದೆಯಷ್ಟೆ.

ಈವರೆಗೆ ವಿವರಿಸಿರುವ ಅನೇಕ ಶರಣರ ವಿಷಯಗಳ ಮೇಲಿಂದ ತಿಳಿದಿರುವಂತೆ, ಬುದ್ಧದೇವನು ಯಾವ ಉದ್ದೇಶಕ್ಕೋಸ್ಕರ ಬೌದ್ಧ ಮತವನ್ನುಂಟು ಮಾಡಿದನೋ ಆ ಶ್ರೇಷ್ಠತರವಾದ ಉದ್ದೇಶಕ್ಕೋಸ್ಕರವಾಗಿಯೇ ಬಸವಣ್ಣನವರು ವೀರಶೈವ ಮತವನ್ನು ಪ್ರಸಾರ ಮಾಡಿದರೆಂತಲೂ ಮತ್ತು ಈ ಉಭಯತರ ಮತ ಪ್ರಸಾರ ಪದ್ಧತಿಗಳು ಕೂಡ ಎಷ್ಟೋ ಸಮಾನವಾಗಿದ ವೆಂತಲೂ ನಿಷ್ಪಕ್ಷಪಾತಿಗಳಾದ ವಾಚಕರಿಗೆ ವ್ಯಕ್ತವಾಗದಿರಲಾರದು. ಆದರೆ, ಬುದ್ಧದೇವನ ಮತ ಬೇರೆ. ಈ ಮಹಾನುಭಾವರ ಮತ ಬೇರೆ. ಆತನ ಮಾರ್ಗವೇ ಬೇರೆ. ಏಕೆಂದರೆ, ಆತನು ಜ್ಞಾನಮೂರ್ತಿಯಾಗಿದ್ದುದು. ಇವರು ಭಕ್ತಿಯ ಪುತ್ಥಳಿಯಾಗಿದ್ದರು. ಹೀಗಿದ್ದರೂ ಸಾಧುವರ್ಯ ಯೇಸು ಕ್ರಿಸ್ತನು ಹೇಳಿರುವಂತೆ "ನಾನು ನೀತಿವಂತರನ್ನು ಕರೆಯುವುದಕ್ಕೆ ಬಂದವನಲ್ಲ ಪಾಪಿಗಳನ್ನು ಕರೆಯುವುದಕ್ಕೆ ಬಂದವನು." ಎಂಬುವುದಾಗಿಯೇ ಈ ಉಭಯತರೂ ಭಾವಿಸಿದ್ದರೆಂದು ಇವರು ಮಾಡಿರುವ ಮಹತ್ತರವಾದ ಕಾರ್ಯಗಳಿಂದ ವ್ಯಕ್ತವಾಗುತ್ತದೆ. ಏಕೆಂದರೆ, ಉಭಯತರೂ ದಯಾನಿಧಿಗಳೇ ಆಗಿದ್ದರು, ಆ ವಿಶ್ವಪ್ರೇಮವೆ ಬಸವಣ್ಣನವರ ರೂಪದಲ್ಲಿ ಅವತರಿಸಿದ್ದಿತು. ಆದುದರಿಂದಲೇ ಅವರಿಗೆ ಎಲ್ಲೆಲ್ಲಿಯೂ ಸಂಗಮೇಶನೇ ತೋರುತ್ತಿದ್ದನು. ಈ ಕೆಳಗಿನ ವಚನಗಳ ಮೇಲಿಂದ ಈ ಮಹಾನುಭಾವರ

ಧಾರ್ಮಿಕ ಮತ್ತು ದೈವಿಕ ವಿಚಾರಗಳು ಎಂತಹ ಶ್ರೇಷ್ಠತರವಾದವುಗಳಾಗಿದ್ದುವೆಂಬು
ದು ಸ್ಪಷ್ಟವಾಗುತ್ತದೆ.

ದಯವಿಲ್ಲದ ಧರ್ಮವದಾವುದಯ್ಯಾ? ದಯವಿರಬೇಕು ಸಕಲ ಪ್ರಾಣಿಗಳಲ್ಲಿ
ದಯವೇ ಧರ್ಮದ ಮೂಲವಯ್ಯ. ಕೂಡಲಸಂಗಮ ದೇವರಂತಲ್ಲದೊಲ್ಲನಯ್ಯ ?
ಎತ್ತೆತ್ತ ನೋಡಿದತ್ತ ನೀನೇ ದೇವಾ ಸಕಲ ವಿಸ್ತಾರದರೂಹು ನೀನೇ ದೇವಾ. ವಿಶ್ವ
ತೋಮುಖ ನೀನೇ ದೇವಾ. ವಿಶ್ವತೋಬಾಹು ನೀನೇ ದೇವಾ. ವಿಶ್ವತೋಪಾದ ನೀನೇ
ದೇವಾ ಕೂಡಲ ಸಂಗಮದೇವಾ.

ಜ್ಞಾನ ಮಾರ್ಗದಲ್ಲಿ ಹೋದ ಬುದ್ಧನು ತಾನು ಬುದ್ಧ(ಜ್ಞಾನಿ) ಎಂದು
ಹೇಳಿಕೊಂಡನು. ಆದರೆ, ಬಸವಣ್ಣನವರು ತಾವು ಭಕ್ತಿಮಾರ್ಗದಲ್ಲಿ ಹೋಗಿ
ಭಕ್ತಾಗ್ರಗಣ್ಯರಾಗಿದ್ದರೂ ಅವರಿಗೆ ತಾನು ಭಕ್ತನೆಂಬ ಭಾವನೆಯೇ ಉಂಟಾ
-ಗಿರಲಿಲ್ಲ. ಇದಲ್ಲವೇ ಭಕ್ತಶಿರೋಮಣಿಗಳ ಲಕ್ಷಣವು? ಇವರು ತಮ್ಮನ್ನು
ಕುರಿತು ಈ ಪ್ರಕಾರ ಹೇಳಿಕೊಂಡಿದ್ದಾರೆ.

ಭಕ್ತಿಯಿಲ್ಲದ ಬಡವ ನಾನಯ್ಯ. ಕಕ್ಕಯ್ಯನ ಮನೆಯಲ್ಲು ಬೇಡಿದೆ. ದಾಸ
ಯ್ಯನ ಮನೆಯಲ್ಲು ಬೇಡಿದೆ. ಚನ್ನಯ್ಯನ ಮನೆಯಲ್ಲುಬೇಡಿದೆ ಎಲ್ಲಾ ಪುರಾತ
ನರು ನೆರೆದು ಭಕ್ತಿ ಭಿಕ್ಷವನಿಕ್ಕಿದರೆ. ಎನ್ನ ಪಾತ್ರೆ ತುಂಬಿತ್ತು ಕೂಡಲ ಸಂಗಮ
ದೇವಾ.

ಎನಗಿಂತ ಕಿರಿಯರಾರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ. ನಿಮ ಪಾದಸಾಕ್ಷಿ.
ಎನ್ನ ಮನ ಸಾಕ್ಷಿ. ಕೂಡಲ ಸಂಗಮದೇವಾ ಎನಗಿದೇ ದಿವ್ಯ. ಬ್ರಹ್ಮ ಪದವಿಯ
ನೊಲ್ಲೆ, ವಿಷ್ಣು ಪದವಿಯನೊಲ್ಲೆ, ರುದ್ರಪದವಿಯನೊಲ್ಲೆ. ನಾನು ಮತ್ತಾವ
ಪದವಿಯನ್ನೊಲ್ಲೆನಯ್ಯ ಕೂಡಲ ಸಂಗಮದೇವಾ. ನಿಮ್ಮ ಪಾದವನರಿದಿಪ್ಪ ಮಹಾ
ಪದವಿಯನೇ ಕರುಣಿಸಯ್ಯ.

ಈ ಮಹಾನುಭಾವರ ಅಸಾಧಾರಣವಾದ ಸಾತ್ವಿಕ ವೃತ್ತಿಯ ಪ್ರಭಾವದಿಂದ
ಲೂ. ವೀರಶೈವ ಮತ ತತ್ವಗಳ ಸಹಾಯದಿಂದಲೂ. ಆ ಕಲ್ಯಾಣ ಪಟ್ಟಣದಲ್ಲಿ
ಪ್ರತಿನಿತ್ಯ ಸಹಸ್ರಾವಧಿ ಜನಗಳಿಗೆ ಸುಖ ಭೋಜನವು ದೊರೆಯುತ್ತಿದ್ದಿತಲ್ಲದೇ
ಶ್ರೀ ಪ್ರಭು ದೇವರು. ಶ್ರೀ ಶ್ರೀ ಚನ್ನಬಸವಣ್ಣನವರು. ಶ್ರೀ ಸಿದ್ಧರಾಮ ಶಿವ
ಯೋಗಿಗಳು ಮೊದಲಾದ ಅನೇಕ ಶಿವಾನುಭವಿಗಳ ಮಹೋಪದೇಶಗಳ ಸಂಭ್ರಮವೇ
ನಡೆಯುತ್ತಿದ್ದುದನ್ನು ನೋಡಿ ತಿಂಗಳೊಂದಕ್ಕೆ ಒಂದು ಸಾವಿರ ಹೊನ್ನಿನ ವೇತನ
ವುಳ್ಳ ಈ ಬಸವಣ್ಣನವರಿಂದ ಇಷ್ಟೆಲ್ಲಾ 'ವೈಭವಗಳು ಜರುಗುವುದು ಸಾಧ್ಯವೇ ?



ರಾಜಧಾನಿಯ ದ್ರವ್ಯವನ್ನೆಲ್ಲಾ ಸ್ವೇಚ್ಛೆಯಾಗಿ ಸೂರೆ ಮಾಡುತ್ತಿರುವದರಿಂದಲೇ
ಈ ಪ್ರಕಾರ ನಡೆದಿದೆಯೆಂದು ಆ ಕಾಲದಲ್ಲಿ ಹೇಗೆ ಅನೇಕರು ಭಾವಿಸಿದ್ದರೋ
ಹಾಗೆಯೇ ಈ ಕಾಲದಲ್ಲಿ ಅನೇಕರು ಬರೆಯುತ್ತಿದ್ದಾರೆ. ಇಂಥವರಿಗೆ ನಿಸ್ಪೃಹತೆಯ
ಪ್ರಭಾವವು ವೀರಶೈವ ಮತದಲ್ಲಿರುವ ರಹಸ್ಯವುಗೊತ್ತಿಲ್ಲವೆಂದೇ ಹೇಳಬೇಕಾಗುತ್ತದೆ.

ವೀರಶೈವರಿಗೆ ಕಾಯಕವೇ ಕೈಲಾಸ' ತಾನು ಕೈಮುಟ್ಟಿ ಯಾವುದಾದರೊಂದು
ಅನ್ಯರಿಗೆ ಅಪಾಯವಿಲ್ಲದ ಕೆಲಸವನ್ನು ಮಾಡಿ ಅದರಿಂದ ಸಂಪಾದನೆಯಾದುದನ್ನೇ
ಗುರುಲಿಂಗ ಜಂಗಮ ಸೇವೆಗರ್ಪಿಸಿ ತಾನು ಜೀವಿಸಬೇಕು. ವೀರಶೈವನಿಗೆ ಈ ಸ್ವಾವ
ಲಂಬನೆಯೇ ಜೀವನದ ಮುಖ್ಯೋಪಾಯವಾಗಿದೆ. ಆದುದರಿಂದ ಕಾಯಕಗಳಲ್ಲಿ
ಶ್ರೇಷ್ಠ ಕನಿಷ್ಠ ಗಳೆಂಬ ಭಿನ್ನ ಭೇದಗಳನ್ನು ವೀರಶೈವನು ಮಾಡುವುದಿಲ್ಲ. ಒಕ್ಕಲು
ತನವನ್ನು ಮಾಡುವುದಾಗಲೀ. ಬಡಗಿತನವನ್ನು ಮಾಡುವುದಾಗಲಿ, ಬಟ್ಟೆಯನ್ನು
ಹೊಲಿಯುವುದಾಗಲಿ, ನೇಯುವುದಾಗಲಿ, ಕ್ಷೌರವನ್ನು ಮಾಡುವದಾಗಲಿ ಇವುಗ
ಳೆಲ್ಲಾ ಸಮಾನವಾದ ಕಾಯಕಗಳೇ ಆಗಿವೆ. ಆಚಾರ ಗುಣಸ್ವಭಾವಗಳು
ಮುಖ್ಯವಾದವುಗಳೇ ವಿನಹ ಮನುಷ್ಯನ ಆತ್ಮೋನ್ನತಿಗೆ ಈ ಕಾಯಕಗಳೇನೂ
ಕಾರಣವಾಗಿಲ್ಲ. ಆದುದರಿಂದಲೇ ಮಡಿವಾಳ ಮಾಚಯ್ಯನವರು ಬಟ್ಟೆಗಳನ್ನು
ತೊಳೆಯುತ್ತಿದ್ದರು. ಮೋಳಿಗೆ ಮಾರಯ್ಯನವರು ಕಟ್ಟಿಗೆ ಹೊರೆಗಳನ್ನು ತರು-
ತ್ತಿದ್ದರು. ಜೇಡರ ದಾಸಯ್ಯನವರು ಬಟ್ಟೆಗಳನ್ನು ನೇಯುತ್ತಿದ್ದರು. ಶಂಕರ
ದಾಸಯ್ಯನವರು ಸೂಜಿಯ ಕಾಯಕ ಎಂದರೆ ಬಟ್ಟೆಗಳನ್ನು ಹೊಲಿಯುವ
ಕೆಲಸ ಮಾಡುತ್ತಿದ್ದರು. ಈ ಪ್ರಕಾರ ಸಕಲ ಶರಣರೂ ಒಂದೊಂದು ಕಾಯ-
ಕವನ್ನವಲಂಬಿಸಿಯೇ ಗುರುಲಿಂಗ ಜಂಗಮ ಸೇವಾ ತತ್ಪರರಾಗುತ್ತಿದ್ದರು.
ಏಕೆಂದರೆ, ಕಾಯಕವು ವೀರಶೈವ ಮತದಲ್ಲಿ ಬಹುಮುಖ್ಯವಾದ ತತ್ವವಾಗಿದೆ.

# ಬಸವಣ್ಣವರ ದೃಷ್ಠಿಯಲ್ಲಿ ಮಹಿಳೆ

ಪ್ರೊ, ಕಲ್ಯಾಣಮ್ಮ ಲಂಗೋಟಿ ಎಂ. ಎ., (ಕನ್ನಡ) ಸಿ. ವಾಯ್. ಇಡಿ.
ರಾಮದುರ್ಗ

ಜಗತ್ತಿನ ಜನಸಂಖ್ಯೆಯ ಅರ್ಧಭಾಗದಷ್ಟು ಮಹಿಳೆಯರಿದ್ದಾರೆ. ಶತಶತಮಾನ
ಗಳಿಂದ ಪುರುಷಪ್ರಧಾನವಾದ ಈ ಸಮಾಜದಲ್ಲಿ ಸ್ತ್ರೀಯರಿಗೆ ಸಮಾನ ಅವಕಾಶಗಳು
ದೊರೆಯಲಿಲ್ಲ. ೧೨ ನೆಯ ಶತಮಾನದ ಅಂದರೆ ಬಸವಾದಿ ಶರಣರ ಪೂರ್ವದಲ್ಲಿ
ನಮ್ಮ ದೇಶದಲ್ಲಿ ಸ್ತ್ರೀಯರ ಸ್ಥಿತಿಯ ಅಸಹನೀಯವಾಗಿತ್ತು. ಸ್ತ್ರೀಗೆ ಧಾರ್ಮಿಕವಾಗಿ
ಸಮಾಜಿಕವಾಗಿ ಯಾವ ಸ್ಥಾನಮಾನಗಳೂ ಇರಲಿಲ. ಸ್ತ್ರೀಯನ್ನು ಮಾಯೆ, ಅವಳು
ಕೇವಲ ಭೋಗವಸ್ತುವೆಂದು ಪರಿಗಣಿಸಿ ಧರ್ಮಕಾರ್ಯಗಳಿಂದ, ದೇವರ ಉಪಾಸನೆ
ಯಿಂದ ದೂರಮಾಡಲಾಗಿತ್ತು. ಮಹಿಳೆಯ ಬದುಕೆಂದರೆ ಪುರುಷನಿಗೆ ಭೋಗ
ಕೊಡುವಿಕೆ ಮಕ್ಕಳನ್ನು ಹೆರುವುದು, ಅಡಿಗೆಮನೆಯ ಕೆಲಸ, ಇಷ್ಟಕ್ಕೆಯೇ ಅವಳ
ಬಾಳನ್ನು ನಿರ್ಧರಿಸಲಾಗಿತ್ತು. ಸ್ತ್ರೀಯರಿಗೂ ಮನಸ್ಸಿದೆ, ಆಶೆ ಆಕಾಂಕ್ಷೆಗಳಿವೆ,
ಭಾವನೆಗಳಿವೆ, ಹೃದಯವಿದೆಯೆಂಬುದನ್ನು ಮರೆತು ಅವಳನ್ನು ಸಮಾಜಜೀವನ
ದಿಂದ ದೂರ ಮಾಡಲಾಗಿತ್ತು.

ಹೆಣ್ಣು ಮಕ್ಕಳ ಬದುಕು ಈ ರೀತಿಯ ದುರವಸ್ಥೆಗೀಡಾದಾಗ ೧೨ ನೆಯ
ಶತಮಾನದಲ್ಲಿ ಬಸವಾದಿ ಶರಣರು ಅನುಭವ ಮಂಟಪ ಸ್ಥಾಪಿಸಿ ಮಹಿಳೆಯರಿಗೆ
ಮುಕ್ತ ಅವಕಾಶವನ್ನು ನೀಡಿದರು.

ಹೆಣ್ಣು ಮಾಯೆಯೆಂಬರು ಹೆಣ್ಣು ಮಾಯೆಯಲ್ಲ;
ಹೊನ್ನು ಮಾಯೆಯೆಂಬರು ಹೊನ್ನು ಮಾಯೆಯಲ್ಲ;
ಮಣ್ಣು ಮಾಯೆಯೆಂಬರು, ಮಣ್ಣು ಮಾಯೆಯಲ್ಲ;
ಮನದ ಮುಂದಣ ಆಸೆಯೇ ಮಾಯೆಕಾಣಾಗುಹೇಶ್ವರ ||

ಹೆಣ್ಣನ್ನು ಮಾಯೇ, ಮೋಹ, ಸಂಸಾರಕ್ಕೆ ಬಂಧನಕಾರಿ ಎಂದು ಅಂದಿನ
ಸಮಾಜದಲ್ಲಿ ಬೇರೂರಿದ್ದ ಭಾವನೆಗಳನ್ನು ತೆಗೆದು ಹೆಣ್ಣು ಮಾಯೆಯಲ್ಲ, ಮನ
ಸ್ಸಿನ ಮುಂದಿರುವ 'ಬೇಕುಬೇಕು' ಎಂಬ ಆಸೆಯೇ ಮಾಯೆ ಎಂದು ಪ್ರಭು ಹೇಳಿ
ದ್ದಾರೆ, ಇದಲ್ಲದೇ, ಶಿವಯೋಗಿ ಸಿದ್ಧರಾಮೇಶ್ವರರು ಇನ್ನೂ ಒಂದು ಹೆಜ್ಜೆ ಮುಂದು
ವರೆದು ಹೇಳಿದ್ದಾರೆ–

ಹೆಣ್ಣು ಹೆಣ್ಣಲ್ಲ, ಹೆಣ್ಣು ರಕ್ಕಸಿಯಲ್ಲ;
ಹೆಣ್ಣು ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನ ನೋಡ!

ಈ ರೀತಿಯಾಗಿ ಶರಣರು ಸ್ತ್ರೀಯನ್ನು ದೈವತ್ವ ಸ್ವರೂಪದಲ್ಲಿ ಕಂಡಿದ್ದಾರೆ.
ಸ್ತ್ರೀಯರಿಗೆ ಅನುಭವ ಮಂಟಪದಲ್ಲಿ ಧಾರ್ಮಿಕ, ನೈತಿಕ, ಸಾಮಾಜಿಕಶಿಕ್ಷಣ ಒದ
ಗಿಸಿ, ಜೀವನದ ಸರ್ವರಂಗದಲ್ಲಿಯೂ ಪುರುಷನಂತೆ ಸಮಾನಅವಕಾಶ ಮಾಡಿಕೊ
ಟ್ಟರು.

ಗಂಡು – ಹೆಣ್ಣು ಎಂಬ ಭೇದ – ಭಾವ ತೊಡೆದರು ಶರಣಜೇಡರದಾಸಿಮಯ್ಯ
ಹೇಳುವಂತೆ

ಮೊಲೆ ಮೂಡಿಬಂದರೆ ಹೆಣ್ಣೆಂಬರು,
ಗಡ್ಡ ಮೀಸೆಬಂದರೆ ಗಂಡೆಂಬರು
ನಡುವೆ ಸುಳಿವ ಆತ್ಮ ಹೆಣ್ಣು ಅಲ ಗಂಡೂಅಲ್ಲ ಕಾಣಾರಾಮನಾಥಾ

ಹೆಣ್ಣನ್ನು ಮಾಯೆಯೆಂದು ಕಾಣುವುದು ವಿಕೃತಿ, ಹೆಣ್ಣನ್ನು ಭೊಗವಸ್ತು
ವೆಂದು ಪರಿಗಣಿಸುವುದು ಪ್ರಕೃತಿ, ಆದರೆ ಹೆಣ್ಣನ್ನು ತಾಯಿಯೆಂದು, ದೈವವೆಂದು
ಪರಿಗಣಿಸಿದುದು ಶರಣರ ಸಂಸ್ಕೃತಿಯಾಗಿದೆ.

ಅಂದಿನ ಕಾಲದ ಪುರುಷವರ್ಗದ ಸ್ತ್ರೀಶೋಷಣೆಯನ್ನು ಪ್ರತಿಭಟಿಸಿದವರೇಶರಣ
ಶರಣೆಯರು ಪುರುಷರಂತೆ ಸ್ತ್ರೀಯೂ ದೇವರ ಪೂಜೆ, ಅಧ್ಯಾತ್ಮಚಿಂತನ, ಸಾಮಾಜಿಕ
ಸ್ಥಿತಿ–ಗತಿಗಳ ಕುರಿತು ಸೇವೆಗೆ ಬಾಧ್ಯಳು ಎಂಬುದನ್ನು ಶರಣರು ಸಾರಿದರು. ವೈರಾ
ಗ್ಯಮೇರು ಅಕ್ಕಮಹಾದೇವಿಯವರು ಈ ಕುರಿತು ಸ್ಪಷ್ಟವಾಗಿ ತಿಳಿಸುತ್ತಾರೆ.

ಪುರುಷನ ಮುಂದೆ ಮಾಯೆ ಸ್ತ್ರೀಯೆಂಬ ಅಭಿಮಾನವಾಗಿ ಕಾಡುವುದು
ಸ್ತ್ರೀಯಮುಂದೆ ಮಾಯೆ ಪುರುಷನೆಂಬ ಅಭಿಮಾನವಾಗಿ ಕಾಡುವುದು
ಲೋಕವೆಂಬ ಮಾಯೆಗೆ ಶರಣ ಚಾರಿತ್ರ್ಯ ಮರುಳಾಗಿ ತೋರುವುದು
ಚೆನ್ನಮಲ್ಲಿಕಾರ್ಜುನ ನೊಲಿದ ಶರಣರಿಗೆ ಮಾಯೆಇಲ್ಲ, ಮರಹಿಲ್ಲ,
ಅಭಿಮಾನವೂ ಇಲ್ಲ

ಮಾನವರ ಮನದಲ್ಲಿರುವ ಅಜ್ಞಾನವನ್ನು ತೊರೆದಾಗ ಮಾಯೆ, ಮರವು,
ಯಾವುದೂ ಉಳಿಯುವುದಿಲ್ಲ. ಬಸವಾದಿ ಶರಣರು ಅಂದಿನ ಸಮಾಜದ ಜನರಲ್ಲಿರುವ
ಮನೋ ಭೂಮಿಕೆಯನ್ನು ಕೃಷಿ ಮಾಡಿ, ಸರ್ವರಿಗೂ ಸಂಸ್ಕಾರವಿತ್ತರು. ಕಾಯಕ
ಕಲೆ– ಉಪಾಸನೆಗಳನ್ನು ಸ್ತ್ರೀ-ಪುರುಷರೆಂಬ ಭೇದವಿಲ್ಲದೇ ಒದಗಿಸಿದರು. ತನುವಿನ
ದುರ್ಗುಣಗಳನ್ನು ಕಳೆದುಕೊಂಡು ಭೌತಿಕ ತನುಶುದ್ಧವಾಗುವುದು ಕಾಯಕದಿಂದ.
ಮನದ ದುರ್ವಿಕಾರಗಳನ್ನು ತೊಡೆದು ಕೊಂಡು ಮನಶುದ್ಧವಾಗುವುದು ಕಲೆಗಳಿಂದ;
ಭಾವದ ದುರ್ಭಾವನೆಗಳು ನಾಶವಾಗುವುದು ಉಪಾಸನೆಯಿಂದ.



ಈ ರೀತಿ ಮನುಷ್ಯನ ಮೂರು ಘಟಕಗಳಾದ ತನು, ಮನ, ಭಾವಗಳ
ದುರ್ಗುಣ, ದುರ್ವಿಕಾರ ದುರ್ಭಾವಗಳನ್ನು ತೊಡೆದು ಹಾಕಲು ಕಾಯಕ-ಕಲೆ-
ಉಪಾಸನೆ ತತ್ವಗಳನ್ನು ನೀಡಿ ಮಹಿಳೆಯರನ್ನು ಅಷ್ಟೇ ಏಕೆ ಪುರುಷರನ್ನೂ ಸಹ
ಶರಣಾಗಿಸಿದರು.

ಬಸವಾದಿ ಶರಣೆಯರು ಸ್ತ್ರೀಯರಿಗೆ ಆದರ್ಶ ಜೀವನ ಸಾಗಿಸಲು ಮುಕ್ತವಾಗಿ
ಸ್ವಾತಂತ್ರ್ಯ ವೆಂದರೆ ಇಂದಿನ ಕಲಿತವರೆಂಬ ಸ್ತ್ರೀಯರು ದುರುಪಯೋಗ ಮಾಡಿ
ಕೊಂಡು ಬದುಕುತ್ತಿರುವ ಸ್ವೇಚ್ಛಾಚಾರವಲ್ಲ. ಸ್ವಾತಂತ್ರ್ಯ-ಸ್ವೇಚ್ಛೆ ಎರಡು ಭಿನ್ನವಾ
ದವುಗಳು ಸ್ವಾತಂತ್ರ್ಯವೆಂದರೆ ತನ್ನ ಹೊಣೆಗಾರಿಕೆ, ಕರ್ತವ್ಯಗಳನ್ನು ಅರಿತುಕೊಂಡು
ಕೌಟುಂಬಿಕ, ಸಾಮಾಜಿಕ ಮತ್ತು ರಾಷ್ಟ್ರದ ಏಳಿಗೆಯ ಕುರಿತು ಸೇವೆ ಸಲ್ಲಿಸುವು
ದಾಗಿದೆ. ಸ್ವೇಚ್ಛೆಯು ಸ್ತ್ರೀಯು ತನ್ನ ಮನಬಂದಂತೆ ದುರ್ವಿಕಾರದಿಂದೊಡ
ಗೂಡಿ ಮನೆ, ಸಮಾಜ, ರಾಷ್ಟ್ರ ಹಾಳುಮಾಡುವುದಾಗಿದೆ. ಶರಣರು ಮಾತ್ರ ಸ್ತ್ರೀ
ಯರಿಗೆ ಸ್ವೇಚ್ಛೆಯನ್ನು ಕಲಿಸದೇ ಕಾಯಕ ಜೀವನದ ಸ್ವಾತಂತ್ರ್ಯತೆಯನ್ನು ಕಲಿಸಿದರು.

ಇಂತಹ ಕಾಯಕ ತತ್ವದ ಅನುಷ್ಠಾನದಿಂದಾಗಿ ಅಂದು ಕಲ್ಯಾಣದಲ್ಲಿ ಅಯ್ದಕ್ಕಿ
ಲಕ್ಕಮ್ಮ ಮೋಳಿಗೆ ಮಹಾದೇವಮ್ಮ, ಲಿಂಗಮ್ಮ, ಗಂಗಮ್ಮ, ನೀಲಮ್ಮ, ಅಕ್ಕ
ಮಹಾದೇವಿ, ಸತ್ಯಕ್ಕ, ಮುಕ್ತಾಯಕ್ಕ, ಕಲ್ಯಾಣಮ್ಮ, ಕಾಳವ್ವೆ, ಅಕ್ಕನಾಗಮ್ಮ,
ಇತ್ಯಾದಿ ನೂರಾರು ಮಹಿಳೆಯರು ಆದರ್ಶ ಜೀವನ ಸಾಗಿಸಿ ಶರಣೆಯರಾದರು.

ಶರಣರ ದೃಷ್ಟಿಯಲ್ಲಿ ಸ್ತ್ರೀಯು ಗಂಡನ ಆಜ್ಞಾಧಾರಕಳಷ್ಟೇ ಅಲ್ಲ. ಗಂಡನು
ತಪ್ಪಿ ನಡೆದಾಗ ತಪ್ಪುಕಾರ್ಯ ಮಾಡಿದಾಗ ಗುರುವಾಗಿ ಆತನನ್ನು ತಿದ್ದುವ ಮಾರ್ಗ
ದರ್ಶಕಳೂ ಆಗಿದ್ದಾಳೆ.

ಕಾಶ್ಮೀರ ದೇಶದ ರಾಜ, ಮಹಾದೇವ ಭೂಪಾಲ ಅಂದು ರಾಜ್ಯವನ್ನು ತ್ಯಜಿಸಿ
ರಾಣಿ ಮಹಾದೇವಿಯೊಂದಿಗೆ ಕಲ್ಯಾಣಕ್ಕೆ ಬಂದು, ಕಟ್ಟಿಗೆ ಮಾರುವ ಕಾಯಕ
ಕೈಗೊಂಡ "ಮೋಳಿಗೆಮಾರಯ್ಯ ಮಹಾದೇವಮ್ಮ" ನವರೆಂದು ಹೆಸರಾಗಿ ಬದುಕು
ತ್ತಿದ್ದಾಗ' ಹತ್ತಾರುವರ್ಷಗಳಾದರೂ ತನ್ನ ಭಕ್ತಿಯ ನಿಜಸುಖ ದೊರೆಯಲಿಲ್ಲ
ವೆಂದು ವ್ಯಾಕಲನಾದಾಗ ರಾಣಿ ಮಹಾದೇವಿ ಅಂದರೆ ಶರಣೆ ಮಹಾದೇವಮ್ಮ ಗಂಡ
ನಿಗೆ ಎಚ್ಚರಿಸುತ್ತಾಳೆ.

ಮಾಡಿದ ಭಕ್ತಿಗೆ ಕೈಲಾಸಕ್ಕೆಹೋದೆನೆಂಬುದು ಕೈಕೂಲಿ; ಸಕಲ ದೇಶಕೋಶ
ವಾಸ ಭಂಡಾರಸವಾಲಕ್ಷಮುಂತಾದ ಸಂಬಂಧ ಸ್ತ್ರೀಯರ ಬಿಟ್ಟು ಬಂದನೆಂಬ ಕೈಕೊ
ಲಿಯೇ ನಿಮ್ಮಭಕ್ತಿ ? ಕೂಟಕ್ಕೆ ಕುರುಹಾದುದನರಿಯದೆ, ಆತ್ಮಕೆ ಅರಿವಾದುದ
ನರಿಯದೆ, ಕೈಲಾಸವೆಂಬ ಸೂತ್ರದ ಒಳಗಿಗೆ ಮನಸೋತಿರಲ್ಲಾ ! ಕೈಯಲ್ಲಿ ಜ್ಯೋತಿ
ಯಹಿಡಿದು ಕತ್ತಲೆ ಎನಲೇತಕ್ಕೆ ? ಪರುಷ ಕೈಯಲ್ಲಿದ್ದು ಕೂಲಿಯ ಬೇಡಲೇತಕ್ಕೆ ?

ನಿತ್ಯಅನಿತ್ಯವ ತಿಳಿದು, ಮರ್ತ್ಯ ಕೈಲಾಸವೆಂಬುದು ಭಕ್ತರಿಗೆ ಮುಕ್ತಿಯಿಲ್ಲ ! ಅಲ್ಲಿ ಇಲ್ಲಿ ಎಂಬಗೆಲ್ಲಗೂಳಿತನ ಬೇಡ! ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಅಲ್ಲಿ ಇಲ್ಲಿಯೂ ತಾನೆ;

ತಮ್ಮ ಕೈಹಿಡಿದ ಗಂಡಂದಿರು ಆಧ್ಯಾತ್ಮಸಾಧನೆಯಲ್ಲಿ ಸಾಮಾಜಿಕ ಬದುಕಿನಲ್ಲಿ ಅಷ್ಟೇಏಕೆ ಕಾಯಕ ನಿಷ್ಠೆಯಲ್ಲಿ ತಪ್ಪಿದಾಗಲೂ ಅವರನ್ನು ಎಚ್ಚರಿಸಿ ತಿಳಿಹೇಳಿ ಸರಿಮಾರ್ಗಕ್ಕೆ ತರುವಮಟ್ಟಕ್ಕೆ ಸ್ತ್ರೀಯರು ಮೇಲೇರಲು ಅವಕಾಶ ನೀಡಿದವರು ಬಸವಾದಿ ಶರಣರು.

ಆಯ್ದಕ್ಕಿ ಮಾರಯ್ಯನೆಂಬ ಶರಣ ಒಂದು ಸಲ ತನ್ನ ಕಾಯಕಕ್ಕೆ ಹೋಗಿ ಅಕ್ಕಿ ಆರಿಸಿಕೊಂಡು ಬಂದಾಗ ದಿನಕ್ಕಿಂತ ಹೆಚ್ಚಿಗೆ ಅಕ್ಕಿತಂದುದನ್ನು ಕಂಡು ಆತನ ಸತಿ ಲಕ್ಕಮ್ಮ ಪ್ರಶ್ನಿಸುತ್ತಾಳೆ.

ಒಮ್ಮನವ ಮೀರಿ ಇರ್ಮನದಲ್ಲಿ ತಂದಿರಿ
ಇದು ನಿಮ್ಮ ಮನವೋ ಬಸವಣ್ಣನ ಅನುಮಾನದ ಚಿತ್ತವೋ ?
ಆ ಮಾತು ಮಾರಯ್ಯ ಪ್ರಿಯ ಅಮರೇಶ್ವರ ಲಿಂಗಕ್ಕೆ
ಸಲ್ಲದ ಬೋನ ಅಲ್ಲಿಯೆ ಸುರಿದು ಬನ್ನಿಮಾರಯ್ಯಾ.

ಈ ರೀತಿ ಪ್ರಶ್ನಿಸಿದಾಗ ಏನೊ ಹೆಚ್ಚಿನ ರೀತಿಯ ದಾಸೋಹಕ್ಕೆ ಅನುಕೂಲವಾದಿತೆಂದುತಂದೆ ಎಂದು ಮಾರಯ್ಯ ನುಡಿದನು. ಮಾರಯ್ಯನ ಈ ಮಾತಿನಿಂದ ಲಕ್ಕಮ್ಮಳು ಸಾತ್ವಿಕ ಸಿಟ್ಟಿನಿಂದ ಗಂಡನಿಗೆ ಬುದ್ಧಿ ಹೇಳುವಳು

ಆಸೆಯೆಂಬುದು ಅರಸಿಂಗಲ್ಲದೆ, ಶಿವಭಕ್ತರಿಗುಂಟೆ ಅಯ್ಯಾ ?
ರೋಷವೆಂಬುದುಯಮದೂತರಿಗಲ್ಲದೆ, ಅಜಾತರಿಗುಂಟೆ ಅಯ್ಯಾ ?
ಈ ಸಕ್ಕಿಯಾಸೆ ನಿನುಗೇಕೆ? ಈಶ್ವರ ನೊಪ್ಪ
ಮಾರಯ್ಯ ಪ್ರಿಯ ಅಮರೇಶ್ವರ ಲಿಂಗಕ್ಕೆ ದೂರ ಮಾರಯ್ಯಾ

ಈರೀತಿ ಸ್ಪಷ್ಟವಾಗಿ ಪತಿಯನ್ನು ಸರಿದಾರಿಗೆ ತರುವ ಮಟ್ಟದಲ್ಲಿ ಅಂದಿನ ಶರಣೆಯರು ನಿರ್ಮಾಣ ಗೊಂಡಿದ್ದನ್ನು ನೋಡಿದರೆ ಆಶ್ಚರ್ಯವೆನಿಸುತ್ತದೆ.

ತನ್ನ ಇನ್ನೊಂದು ವಚನದಲ್ಲಿ ಲಕ್ಕಮ್ಮ ಇಡೀಜಗತ್ತಿಗೆ ಸಾರ್ವಕಾಲಿಕವಾಗಿ ಮಾನ್ಯವಾಗುವ ಶ್ರೀಮಂತಿಕೆಯ ಸಂದೇಶವನ್ನು ಅರುಹಿದ್ದಾಳೆ.

ಮನಶುದ್ಧವಿಲ್ಲದವರಿಗೆ ದ್ರವ್ಯದ ಬಡತನವಲ್ಲದೆ
ಚಿತ್ತಶುದ್ಧದಲ್ಲಿ ಕಾಯಕವ ಮಾಡುವಲ್ಲಿ
ಸದ್ಭಕ್ತರಿಗೆ ಎತ್ತ ನೋಡಿದಡತ್ತ ಲಕ್ಷ್ಮಿತಾನಾಗಿಪ್ಪಳು
ಮಾರಯ್ಯ ಪ್ರಿಯ ಅಮರೇಶ್ವರಲಿಂಗದ ಸೇವೆಯುಳ್ಳನ್ನಕ್ಕರ

ಸಿದ್ಧಗಂಗಾ



ಇಂದಿಗೆ ಎಂಟುನೂರು ವರುಷಗಳಹಿಂದೆ ಬಸವಾದಿ ಶರಣರು ಸ್ತ್ರೀ ಕುಲವನ್ನು ಮೇಲೆತ್ತಿದರು ಅಲ್ಲಿಯಾವ ಜಾತಿ, ಮತ, ಪಂಥ, ಪಂಗಡ, ಕುಲಗೋತ್ರಗಳ ತಿಕ್ಕಾಟ ಭೇದ - ಭಾವವಿಲ್ಲ, ವಿಶ್ವದ ಜನರೆಲ್ಲ ದೇವರ ಮಕ್ಕಳು. ಮಾನವ ಜನಾಂಗವೆಲ್ಲಾ ಬಂದು, ನಾವೆಲ್ಲರೂ ಸಹೋದರ ಸಹೋದರಿಯರು ಎಂಬ ಸರ್ವರಿಗೂ ಸಮಬಾಳು. ಸಮಾನತೆ ತಂದಿತ್ತರು.
ಬೆಳೆಯುತ್ತಿರುವ ಇಂದಿನ ವೈಜ್ಞಾನಿಕ ಯುಗದಲ್ಲಿ ಮಹಿಳೆಯರೂ ಶಿಕ್ಷಣವಂತರಾಗಿ ತಮ್ಮ ಕರ್ತವ್ಯಗಳನ್ನು ಅರಿತು. ಕುಟುಂಬ ಸಮಾಜ ಅದರೊಂದಿಗೆ ರಾಷ್ಟ್ರದ ಸರ್ವತೋಮುಖ ಅಭಿವೃದ್ಧಿಗಾಗಿ ದುಡಿಯಬೇಕಾಗಿದೆ. ರಾಷ್ಟ್ರಪಿತ ಮಹಾತ್ಮಗಾಂಧಿ – ಯವರು ಹೇಳಿದರಂತೆ “ ಒಬ್ಬ ಗಂಡಸಿಗೆ ಶಿಕ್ಷಣ ವಿತ್ತರೆ ಒಬ್ಬನೆ ಸುಧಾರಿಸುವನು, ಆದರೆ ಒಬ್ಬ ಮಹಿಳೆಗೆ ಶಿಕ್ಷಣ ವಿತ್ತರೆ ಇಡೀ ಕುಟುಂಬವನ್ನೇ ಸುಧಾರಿಸುವಳು. ”

ಆದ್ದರಿಂದ ಬಸವಾದಿ ಶರಣರು ತೋರಿದಂತೆ ಸ್ತ್ರೀಯು ತನ್ನ ಜೀವನದಲ್ಲಿ ಸಹನೆ ತಾಳ್ಮೆ, ಪ್ರೀತಿ, ವಿಶ್ವಾಸ, ಸೇವೆ, ಅನುಕಂಪ, ಅತಿಥಿ ಸತ್ಕಾರ, ಕಾಯಕ ನಿಷ್ಠೆಗಳನ್ನು ಅಳವಡಿಸಿಕೊಳ್ಳಬೇಕು ಸಂಸಾರವೆಂಬ ಬಂಡಿಗೆ ಸ್ತ್ರೀಪುರುಷರಿಬ್ಬರು ಎರಡುಗಾಲಿಗಳಿದ್ದಂತೆ. ಎರಡೂಗಾಲಿಗಳು ಸರಿಯಾಗಿದ್ದರೆ ಮಾತ್ರ ಬಾಳಬಂಡಿ ಸಾಗುವುದು. ಈ ದಿಸೆಯಲ್ಲಿ ಸ್ತ್ರೀಯರು ತಮ್ಮ ತಮ್ಮ ಶಕ್ತ್ಯನು ಸಾರ ಯಾವುದಾದರು ಕಾಯಕಗಳನ್ನು ಕೈಕೊಂಡು ಮನೆ-ಸಮಾಜ- ರಾಷ್ಟ್ರಗಳ ಏಳ್ಗೆಯಲ್ಲಿ ಪಾಲ್ಗೊಳ್ಳಬೇಕು. ಶರಣರು ಹಾಕಿಕೊಟ್ಟ ಮಾರ್ಗದಲ್ಲಿ ಮುಂದುವರೆಯಬೇಕಾಗಿದೆ.

---

## ಶರಣಾರ್ಥಿ

**ರಾಜೇಂದ್ರ ಶಿಶು, ಮೈಸೂರು.**

ಶತಶತಮಾನದಿಂ ತೊಳಲಿದ ಹೆಣ್ಣೆ,
ತಂಪ ನೀ ನೆರೆದೆ. ಮಾತೃತ್ವವನುಕೋರಿ ಕಂಬನಿ
ಸುರಿಸುತಿಹ ಕಂಗಳನು ಬರೆಸಿದೆ, ಶಿಕ್ಷಣವ ನೀನಿತ್ತೆ,
ಸ್ವಾವಲಂಬನನ ಕಲಿಸಿದ್ದೆ ಶೈಕ್ಷಣಿಕ, ಸಾಹಿತ್ಯ
ಸಾಂಸ್ಕೃತಿಕ ವಿವಿಧ ಕ್ಷೇತ್ರದಲ್ಲಿ ಮುನ್ನಗ್ಗಿರೆಂದೆ,
ಹೆಣ್ಣು ಸಾಧಿಸಿದ ಸಾಧನೆ ನಿನ್ನ ಹಾರೈಕೆಯ ಫಲ,
ಕಾರುಣ್ಯ ಸಿಂಧುವೆ ಬಡವರ ಬಂಧುವೆ ನಿನ್ನಿಂದ,
ಸೊಗವಾಯ್ತು ಜಗವು. ಹೆಣ್ಣ ಬಾಳೆಲ್ಲ ಹೊನ್ನ
ಬಾಳಾಯ್ತು, ಬೆಳೆಯಿರೇ ಮುಗಿಲೆತ್ತರ ಬನ್ನಿತರ,
ಧರ್ಮವಂತರೆನಿಸಿ ಸಮಾಜ ಸೇವೆಯನೆಸಗಿ,
ನಿಷ್ಠೆಯಿಂ ಬಾಳಿರಿ, ಜ್ಞಾನದೀಪ್ತಿಗಳಾಗಿ,
ಹರಸಿದೆ ನೀನು ಹೆಣ್ಣು ಮಕ್ಕಳೆಲ್ಲರೇಳಿಗೆ
ಕಂಡು ನಲದೆ ನೀನಂದು, ರಾಜೇಂದ್ರ ಶಿಶುನಾನು,
ಸಲ್ಲಿಸುನುವೆ ನಿನ್ನಡಿಗೆ ಶರಣು ಶರಣಾರ್ಥಿಯನ್ನು,

# ಸಾಲವನು ಕೊಂಬಾಗ ಪಾಲೋಗ ರುಂಡಂತೆ

—ಜೆ. ಶಾರದ ರಾಜಶೇಖರ್
847, 4 ನೇ ಮುಖ್ಯ ರಸ್ತೆ, ವಿಜಯನಗರ, ಬೆಂಗಳೂರು–40

ಸಾಲವನು ಕೊಂಬಾಗ ಪಾಲೋಗ ರುಂಡಂತೆ
ಸಾಲಿಗನು ಬಂದು ಎಳೆವಾಗ ಕಿಬ್ಬದಿಯ
ಕೀಲು ಮುರಿದಂತೆ ಸರ್ವಜ್ಞ

ಎಂಬ ಸರ್ವಜ್ಞನ ವಚನವನ್ನು ಬಲ್ಲದಿರುವರಾರು? ಆದರೆ ತಮ್ಮ ಬೇಡಿಕೆ ಗಳನ್ನು ಅದೂ ಅಧಿಕ ಬೇಡಿಕೆಗಳನ್ನು ಪೂರೈಸಿಕೊಳ್ಳುವ ಸಲುವಾಗಿ ಮನುಷ್ಯ ತನ್ನ ಆದಾಯದ ಮಿತಿಯನ್ನು ಮೀರಿದಾಗ ಸಾಲಕ್ಕೆ ಮೊರೆ ಹೋಗುತ್ತಾನೆ. ಕ್ರಮ ಕ್ರಮೇಣ ಸಾಲ ಮಾಡುವ ಅಭ್ಯಾಸವನ್ನು ಬೆಳೆಸಿಕೊಂಡ ವ್ಯಕ್ತಿ ಅದನ್ನು ಒಂದು ವಿದಥ ರೂಢಿಯನ್ನಾಗಿ ಮಾಡಿಕೊಂಡು ಬಿಡುತ್ತಾನೆ, ದುಶ್ಚಟಗಳಲ್ಲಿ ಸಾಲ ಮಾಡುವುದು ಸಹ ಒಂದು ದುಶ್ಚಟವೆಂದೇ ಹೇಳಬಹುದು. ಸಾಲ ಕೊಟ್ಟವ ಸಾಲ ಬಂದು ಕೇಳಿದಾಗ ವ್ಯಕ್ತಿ ಕುಂದುತ್ತಾನೆ. ಸಾಲತೀರಿಸಲಾಗದವ, ನೆಪಗಳ ಸರಮಾಲೆಯನೇ ಪೋಣಿಸಿ ಸಾಲ ಕೊಟ್ಟವನಿಂದ ತಪ್ಪಿಸಿಕೊಳ್ಳಲು ಪ್ರಯತ್ನಪಡುತ್ತಾನೆ. ಬಡತನದಿಂದ ಸಾಲ ಮಾಡುವೆವೆಂದು ಹೇಳಿದರೂ ಸಹ ಆದಾಯಕ್ಕೆ ತಕ್ಕಂತೆ ಸಂಸಾರ ತೂಗಿಸಬೇಕೆ ವಿನಹ ಸಾಲ ಕೊಡುವವರು ಹೆಚ್ಚಿನ ಬಡ್ಡಿಯ ಆಸೆಗೆ ಇರುವರು ಸಾಲ ಮಾಡುವುದೇ ರೂಢಿ ಮೂಲವಾದರೆ ಆ ವ್ಯಕ್ತಿ ನಿಜತಃ ಸುಖಿಯಿಂದಿರಲಾರ. ಸಾಲ ತೀರಿಸುವಲ್ಲೇ ಅವನು ತನ್ನ ಜೀವಮಾನ ವನ್ನೆಲ್ಲಾ ಕಳೆಯುತ್ತಾನೆ. ಈಗಂತೂ ಅನೇಕ ಉದ್ಯಮಗಳಿಗೆ ಬ್ಯಾಂಕ್ ಸಾಲ ನೀಡುತ್ತಿರುವುದು ಸರಿಯಷ್ಟೆ ಪಡೆದ ಸಾಲವನ್ನು ನಿಗಧಿಯ ಅವಧಿಯಲ್ಲಿ ತೀರಿಸಬೇಕೆಂಬ ಕಾಳಜಿ ಮನದಲ್ಲಿ ಮೂಡಿರಬೇಕು. ಅದಕ್ಕಾಗಿ ಅವನು ಆದಾಯದ ಇಂತಿಷ್ಟು ಭಾಗವನ್ನು ಸಾಲಕ್ಕಾಗಿ ಕಟ್ಟಲು ತೆಗೆದಿಡಬೇಕು. ಇಲ್ಲದಿದ್ದರೆ ದಿವಾಳಿತನ ಶತಃಸಿದ್ಧ, ಸಾಲವನ್ನು ತೀರಿಸಲಾರದೆ ತೀರಿಸಬೇಕೆಂಬ ಚಿಂತೆಯಲ್ಲಿರುವ ವ್ಯಕ್ತಿಗೆ ಮನಸ್ಸು ಸಮಾಧಾನವಿಲ್ಲದೆ ಯಾವ ಕೆಲಸ ಮಾಡಲು ಅವನಲ್ಲಿ ಉತ್ಸಾಹ ಕುಂಠಿತಗೊಳ್ಳತೊಡಗುತ್ತದೆ. ಒಂದು ವಸ್ತುವನ್ನು ನಾವು ಸಾಲಮಾಡಿಕೊಳ್ಳುವ ಮೊದಲು ಆ ವಸ್ತು ನಮಗೆ ಅತ್ಯಾವಶ್ಯಕವೆ ಎಂಬುದನ್ನು ಚಿಂತಿಸಿ ಆ ವಸ್ತು



ಅನಿವಾರ್ಯ ಎಂಬ ಮನವರಿಕೆಯಾದಾಗ ಮಾತ್ರ ಆ ವಸ್ತುವನ್ನು ಸಾಲಮಾಡಿ ಕೊಳ್ಳಬೇಕು.

ದೊಡ್ಡ ದೊಡ್ಡ ವ್ಯಾಪಾರಸ್ತರು ದೊಡ್ಡ ದೊಡ್ಡ ಮೊತ್ತದಲ್ಲಿ ಸಾಲವನ್ನು ಮಾಡಿ, ಅದಕ್ಕೆ ತೆರಬೇಕಾದ ಬಡ್ಡಿಯ ಮೊತ್ತವೂ ಅಧಿಕವಾಗಿ ಬಡ್ಡಿ ಮತ್ತು ಮೂಲ ಧನ ತೀರಿಸಲಾಗದೆ. ಸಾಲಕೊಟ್ಟವರ ಉಪಟಳವನ್ನು ತಾಳಲಾರದೆ, ತಲೆಮರೆಸಿಕೊಂಡು ಹೋಗಿರುವ ನಿದರ್ಶನಗಳುಂಟು. ಮಾನಧನರಾದ ಕೆಲವರು ಆತ್ಮಹತ್ಯೆ ಮಾಡಿಕೊಂಡಿರುವ ನಿದರ್ಶನಗಳುಂಟು.

ಆದಾಯಕ್ಕೆ ತಕ್ಕ ವೆಚ್ಚವನ್ನು ಮಾಡುವ ಅಭ್ಯಾಸವನ್ನು ಮೊದಲು ರೂಢಿ ಸಿಕೊಳ್ಳಬೇಕು. ಸಾಲ ಸಾಧ್ಯವಾದಷ್ಟು ಮಟ್ಟಿಗೆ ಮಾಡಬಾರದೆಂದು ನಿರ್ಧರಿಸಿ- ಕೊಳ್ಳಬೇಕು. ಸಾಲಕ್ಕೆಂದು ಕಂತಿನ ಮೇಲೆ ಕೊಡುವ ಸಾಮಾನುಗಳ ಬೆಲೆ ಒಂದಕ್ಕೆ ಎರಡರಷ್ಟಿರುತ್ತದೆ. ಆದ್ದರಿಂದ ಹಣವನ್ನು ಉಳಿಸಿ ನಂತರ ಕೊಳ್ಳುವುದು ಸೂಕ್ತ ಸಾಲವನ್ನು ಮಾಡದಿರಲು ಮುಖ್ಯ ಉಪಾಯ ವೆಂದರೆ ಆದಷ್ಟು ಹಣವನ್ನು ಕೂಡಿಡುವ ಅಭ್ಯಾಸವನ್ನು ಬೆಳೆಸಿಕೊಳ್ಳಬೇಕು. ಹನಿಗೂಡಿದರೆ ಹಳ್ಳ, ಕೂಡಿಡುವ ತೆನೆಗೂಡಿದರೆ ಬಳ್ಳ, ಎಂಬ ನಾಣ್ಣುಡಿಯನ್ನು ಆಗಾಗ್ಗೆ ಜ್ಞಾಪಿಸಿಕೊಳ್ಳುತ್ತಿರಬೇಕು. ಕೂಡಿಡುವ ಪ್ರವೃತ್ತಿ ಸಣ್ಣ ಪ್ರಮಾಣದಲ್ಲಿ ಪ್ರಾರಂಭವಾದರೂ ಸಹ ಕೊನೆಯಲ್ಲಿ ಅದರ ಮೊತ್ತ ಅಧಿಕವಾಗೇ ಇರುತ್ತದೆ. ಅನವಶ್ಯಕ ಖರ್ಚು ಮಾಡು ವುದನ್ನು ತಡೆಗಟ್ಟಿದಾಗ ಅಧಿಕ ಹಣ ಶೇಖರಗೊಳ್ಳುತ್ತದೆ. ಇತರರ ದಾಕ್ಷಿಣ್ಯಕ್ಕೆ ಒಳಗಾಗಿ ಖರ್ಚುಮಾಡುವ ಪದ್ಧತಿಯನ್ನು ಮೊಟುಕುಗೊಳಿಸಿ. ಉಳಿತಾಯ ಪದ್ಧತಿ ಮನದಲ್ಲಿ ಮೂಡಿ ಕಾರ್ಯದಲ್ಲಿ ಪರ್ಯವಸಾನಗೊಳ್ಳಬೇಕು. ಮೊದಮೊದಲೂ ಈ ಪದ್ಧತಿಯನ್ನು ಅನುಸರಿಸುವಾಗ ಕೊಂಚ ಕಷ್ಟವಾಗಿ ಕಾಣಬಹುದಾದರೂ ಸಹ ಅದು ರೂಢಮೂಲವಾದಂತೆ ಅದು ಸ್ವಾಭಾವಿಕವೆನಿಸುವಷ್ಟು ರೂಢಿಯಾಗುತ್ತದೆ.

ಇದರಿಂದ ನೀವು ಆರ್ಥಿಕ ಸ್ವಾತಂತ್ರ್ಯವನ್ನು ಪಡೆಯುವಿರಿ.

ಬಡತನದ ಬೇಗುದಿ, ಭಯ, ದಿಂದ ಮುಕ್ತರಾಗಬೇಕೆಂದು ಬಯಸುವುದಾದರೆ ಆದಷ್ಟು ಉಳಿಸುವ ಅಭ್ಯಾಸವನ್ನು ರೂಢಿಸಿಕೊಳ್ಳಬೇಕು.

ಹಣವಿಲ್ಲದ ವ್ಯಕ್ತಿ ಹಣಕ್ಕೆ ಸಮಾನನಾಗುವನು ಹಣ ಉಳ್ಳ ವ್ಯಕ್ತಿಯನ್ನು ಎಲ್ಲರೂ ಆದರಾಭಿಮಾನದಿಂದ ಕಾಣುವರೆಂಬುದು, ಎಲ್ಲರಿಗೂ ಹೇಳಿದ ವಿಷಯವೇ ಆಗಿದೆ,

ಆಪತ್ಕಾಲಕ್ಕೆ ಹಣವಂತು ಬೇಕೇ ಬೇಕು, ಅದಕ್ಕಾಗಿ ಸಂಪಾದನೆಯ ಸ್ವಲ್ಪ ಭಾಗವನ್ನಾದರೂ ಕೂಡಿಟ್ಟಿರಬೇಕು.

ಹಣವಿಲ್ಲದ ವ್ಯಕ್ತಿ ಹಣವಿರುವವನ ಕೃಪಾಕಟಾಕ್ಷದಲ್ಲಿ ಬಾಳಬೇಕಾಗುತ್ತದೆ.

The man without money is at the mercy of the man who has it.

ಸಾಮಾನ್ಯ ಆದಾಯ ಉಳ್ಳ ಮಧ್ಯಮ ವರ್ಗದ ಮನುಷ್ಯ ಮನೋರಂಜನೆ
ಗಾಗಿ ತನ್ನ ಆದಾಯದ ಬಹು ಭಾಗವನ್ನು ಖರ್ಚುಮಾಡುತ್ತಾನೆ. ಅದು ತಪ್ಪಿ
ಉಳಿತಾಯ ಮಾಡಿದರೆ ಅವನು ಆರ್ಥಿಕವಾಗಿ ಸುಧೃಡನಾಗಿರಬಲ್ಲ.

'ಇದ್ದಾಗ ಹಿರಿಯುಬ್ಬ ಇಲ್ಲದಾಗ ಕಿರಿಯುಬ್ಬ' ಎಂಬ ನಾಣ್ಣುಡಿಯಂತೆ ಬಾಳ್ವೆ
ಆಗಬಾರದು.

ನಾಳೆ ಎಂಬುದಿದೆ ಎಂಬ ಪ್ರಜ್ಞೆ ನಮ್ಮಲ್ಲಿ ಸದಾಮೂಡಿರಬೇಕು. ಬ್ಯಾಂಕ್
ಗಳಲ್ಲಿ, ಅಂಚೆ ಕಛೇರಿಯಲ್ಲಿ ನಿಮ್ಮ ಖಾತೆಗಳನ್ನು ತೆರೆದು ಸಾಧ್ಯವಾದಷ್ಟು ಉಳಿ
ಸುತ್ತಾ ಬನ್ನಿ ಅದು ಅ ಪದ್ಧನವಾಗಿರುತ್ತದೆ. ಅದಕ್ಕೆ ನಿಮಗೆ ಬಡ್ಡಿಯೂ ಸಹ
ದೊರಕುತ್ತದೆ.

ಹೀಗೆ ಸಣ್ಣ ಉಳಿತಾಯ ಮಾಡುವುದರಿಂದ, ಇತರರನ್ನು ಕಷ್ಟಕಾಲದಲ್ಲಿ ಸಾಲ
ಕೇಳುವ ಪರದಾಟ ತಪ್ಪುತ್ತದೆ. ಜೀವನದಲ್ಲಿ ದೂರದೃಷ್ಟಿ ಇಲ್ಲದಿದ್ದರೆ ಅಪಾಯಕರ
ನೀವು ಉಳಿಸಿದಹಣ ದೊಡ್ಡಮೊತ್ತವಾಗಿ ಮನೆಕಟ್ಟಲು, ಮಗಳಮದುವೆಗೊ, ಮಗನ
ಮುಂಜಿಗೋ, ಯಾವುದಕ್ಕಾದರೂ ಉಪಯೋಗವಾದೀತು,

ಉಳಿತಾಯ ಮಾಡಬೇಕಾದರೆ ಮನುಷ್ಯ ಅನೇಕ ಬಯಕೆಗಳಿಗೆ ಕಡಿವಾಣ
ಹಾಕಬೇಕಾಗುತ್ತದೆ ತನ್ನನ್ನುತಾನೆ ಆಸೆಗಳಿಂದ ನಿಯಂತ್ರಿಸಿಕೊಳ್ಳಬೇಕಾಗುತ್ತದೆ.

ಮನಕ್ಕೆ ಸಂತಸ ನೀಡುವುದೆಂದು ಭಾವಿಸಿ ಮಾದಕ ದ್ರವ್ಯಗಳನ್ನು ಸೇವಿಸುವು
ದರಿಂದ, ಔತಣಕೂಟಗಳಲ್ಲಿ ಭಾಗವಹಿಸುವುದರಿಂದ ಇದು ದೇಹಕ್ಕೆಹಾನಿಯೆಹೊರತು
ಮನರಂಜನೆಯನ್ನಂತೂ ಇವು ನೀಡುವುದಿಲ್ಲ. ಇದರಿಂದ ಅವರ ಆದಾಯ ಮತ್ತು
ವೆಚ್ಚಕ್ಕೆ ಸರಿದೂಗಿಸಲಾರದವರಾಗಿ ಸಾಲಕ್ಕೆ ವಶವಾಗುತ್ತಾರೆ. ಅನೇಕರು ತಮ್ಮ
ಆದಾಯದ $\frac{1}{3}$ ಭಾಗವನ್ನು ಮನರಂಜನೆಗೆ ವಿನಿಯೋಗಿಸುತ್ತಾರೆ. ಮಾನವನಿಗೆ
ಮನರಂಜನೆ ಅಗತ್ಯವಾದರೂ ಸಹ ಅದು ನಮ್ಮ ಆದಾಯದ ಆಧಾರದ ಮೇಲೆ
ಅವಲಂಬಿಸಬೇಕು. ವೆಚ್ಚಹೆಚ್ಚಾದರೆ ಸಂಸಾರ ಪರದಾಟದ ಪರಮಾವಧಿಯನ್ನು
ಮುಟ್ಟುತ್ತದೆ.

ಮನರಂಜನೆಯ ಹೆಸರಿನಲ್ಲಿ ಕೆಟ್ಟಹವ್ಯಾಸಗಳಿಗೆ ಬಲಿಬಿದ್ದವರು, ತಮ್ಮ ನಡತೆ
ಯನ್ನು ಮತ್ತು ಆರೋಗ್ಯವನ್ನು ಸಹ ಕಳೆದುಕೊಳ್ಳುತ್ತಾರೆ. ಜೀವನದಲ್ಲಿ ವಿಜಯಿ
ಗಳಾಗಬೇಕಾದರೆ ಸಂಯಮದ ನಡತೆ ಅತಿ ಅವಶ್ಯಕ.

ಈಗಿನ ಜನಾಂಗದ ಯುವಕ ಯುವತಿಯರು ಹಣವನ್ನು ಪೋಲು ಮಾಡು
ವುದೆ ತಮ್ಮ ಹೆಚ್ಚುಗಾರಿಕೆ ಎಂದು ಭಾವಿಸಿದಂತೆ ಕಾಣುತ್ತಿದ್ದಾರೆ. ಇದು ತಪ್ಪ
ಬೇಕು. ಸಾಲಗಾರರಾಗದೆ ಬಾಳ್ವೆ ನಡೆಸಬೇಕಾದರೆ ಉಳಿತಾಯ ಮನೋಭಾವ
ವನ್ನು ಬಾಲ್ಯದಿಂದಲೇ ರೂಢಿಸಿಕೊಳ್ಳುವಂತಾಗಬೇಕು. ಜೀವನದ ಯಶಸ್ಸಿಗೆ
ಉಳಿತಾಯ ಅತ್ಯಗತ್ಯವಲ್ಲವೆ ಎಂಬುದನ್ನು ಚಿಂತನೆ ಮಾಡಬೇಕಾಗಿದೆ.



## ಕ್ಷೇತ್ರವಾರ್ತೆ.

ದಿನಾಂಕ. 2.4. 1989 ರ ಭಾನುವಾರದಂದು ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರೂ
ತ್ರಿವಿದ ದಾಸೋಹ ಮೂರ್ತಿಗಳೂ ಆದ ಪರಮ ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರ
ಮಹಾ ಸ್ವಾಮಿಗಳವರ 82 ನೆಯ ಜನ್ಮ ದಿನೋತ್ಸವವನ್ನು ಸಹಸ್ರಾರು ಭಕ್ತಾದಿ
ಗಳು ಮತ್ತು ಹಳೆಯ ವಿದ್ಯಾರ್ಥಿಗಳು ಹಾಗೂ ಶ್ರೀ ಮಠದ ವಿವಿದ ಶಿಕ್ಷಣ ಸಂಸ್ಥೆಗಳ
ಸಿಬ್ಬಂದಿ ವರ್ಗದವರು ಅತ್ಯಂತ ವೈಭವಪೂರ್ಣವಾಗಿ ಆಚರಿಸಿ ಗುರು ನಮನ ಸಲ್ಲಿಸಿದರು.

ಸಮಾರಂಭದ ಮುಖ್ಯ ಅತಿಥಿಗಳಾಗಿದ್ದ ರಾಜ್ಯದ ವಿದ್ಯುತ್ ಸಚಿವರಾದ ಶ್ರೀ
ಮಾನ್ ಲಕ್ಷ್ಮೀನರಸಿಂಹಯ್ಯ ನವರು. ಸ್ವಾಮಿಗಳವರ ಸೇವಾ ಜೀವನವನ್ನು ಮುಕ್ತ
ಕಂಠದಿಂದ ಪ್ರಶಂಶಿಸಿದರು. ವಿಧಾನ ಸಭೆಯ ವಿರೋಧ ಪಕ್ಷದ ನಾಯಕಿಯರಾದ
ಶ್ರೀ ಮತಿ ಕೆ. ಎಸ್. ನಾಗರತ್ನಮ್ಮನವರು ಪೂಜ್ಯ ಸ್ವಾಮಿಜೀಯವರ ಅಶೀರ್ವಾದ
ದಿಂದ ನಮ್ಮೆಲ್ಲರ ಜೀವನ ಪುನೀತವಾಗಿದೆ ಎಂದು ಭಕ್ತಿ ನುಡಿಯನ್ನಾಡಿದರು. ಶಾಸ
ಕರಾದ ಶ್ರೀ ಬಿ ಬಿ ಶಿವಪ್ಪನವರು ಸಮಾಜದ ಸರ್ವಾಂಗೀಣ ಅಭಿವೃದ್ದಿಗೆ ಸುಮಾರು
ಆರು ದಶಕಗಳಿಂದ ಸೇವೆ ಸಲ್ಲಿಸುತ್ತ ಬಂದಿರುವ ಸ್ವಾಮಿಗಳವರು ಆದರ್ಶ ಮೂರ್ತಿಗ
ಳಾಗಿದ್ದಾರೆ ಎಂದು ನುಡಿದರು. ಮಾಜಿ ಸಚಿವರಾದ ಶ್ರೀ ರೇವಣ್ಣನವರು ಪರಮ
ಪೂಜ್ಯರ ದೀರ್ಘ ಜೀವನದ ಕೆಲವಾರು ಘಟನೆಗಳನ್ನು ಸ್ಮರಿಸಿದರು. ಮಾಜಿ ಶಾಸಕ
ರಾದ ಶ್ರೀ ಕೆ.ಎಂ. ರುದ್ರಪ್ಪನವರು ಮಾತನಾಡುತ್ತ ಸ್ವಾಮಿಗಳವರು ಮಾಡಿರು ಸೇವೆ
ನೋಬೆಲ್ ಪ್ರಶಸ್ತಿ ಪಡೆದ ಮದರ್ ತೆರೇಸರಿಗಿಂತ ಯಾವ ವಿಧದಲ್ಲೂ ಕಡಿಮೆ
ಯಾದುದಲ್ಲ ರಾಷ್ಟ್ರದ ಹೆಮ್ಮೆಯ ಪುತ್ರರು ಎಂಬುದಾಗಿ ನುಡಿದರು. ಸಮಾರಂಭದಲ್ಲಿ
ಶಾಸಕರಾದ ಶ್ರೀ ಡಿ ಬಿ. ಬಸವರಾಜ್ ರವರು ಮಾತನಾಡಿ ಸ್ವಾಮಿಗಳು ದೀರ್ಘಾಯು
ಗಳಾಗಿಲಿ ಎಂದು ಕೋರಿದರು.

ಅಧ್ಯಕ್ಷ ಭಾಷಣ ಮಾಡುತ್ತಾ ಬೇಲಿ ಮಠದ ಶ್ರೀ ಶ್ರೀ ಶಿವರುದ್ರಸ್ವಾಮಿಗಳು
ಬಸವ ತತ್ವದ ಸಾಕಾರ ಸ್ವರೂಪಿಗಳೂ ಪೂಜ್ಯ ಸ್ವಾಮೀಜಿಯವರೆಂದರು. ಸನ್ಮಾನಿತ
ರಾದ ಡಾ|| ಜಿ ಎಸ್ ಶಿವರುದ್ರಪ್ಪ ನವರು ತಮ್ಮ ಕವನ ಕಾಣಿಕೆಯನ್ನು ಅರ್ಪಿಸಿದರು.
ಡಾ.ಟಿ.ಎಸ್. ಮಲ್ಲಿಕಾರ್ಜುನಯ್ಯನವರು ತಮ್ಮನ್ನು ಸಾವಿನ ದವಡೆಯಿಂದ ರಕ್ಷಿಸಿದ್ದು
ಪೂಜ್ಯ ಸ್ವಾಮೀಜಿಯವರ ಅನುಗ್ರಹ ವೆಂದರು.

ಆಶೀರ್ವಚನ ಮಾಡುತ್ತಾ ಪರಮ ಪೂಜ್ಯ ಡಾ || ಶ್ರೀ ಶ್ರೀ ಶಿವಕುಮಾರ
ಮಹಾ ಸ್ವಾಮಿಗಳವರು, ಇಂದು ಜೀವನ ಅನೈತಿಕತೆಯತ್ತ ಧಾವಿಸುತ್ತಿದೆ. ನಮ್ಮ
ಪೂರ್ವ ಪರಂಪರೆಯನ್ನು ಸ್ಮರಿಸಿ ಕೊಂಡು ಬಾಳೋಣವೆಂದು ಆಶೀರ್ವಚನ
ನೀಡಿದರು.

# ಗ್ರಾಮಾಂತರ ಬಸವ ಜಯಂತಿ-216

ಶ್ರೀ ಹೆಚ್.ವಿ. ವೀರಭದ್ರಯ್ಯ ಉಪನ್ಯಾಸಕರು ಕನ್ನಡ ವಿಭಾಗ, ಸಿದ್ಧಗಂಗಾ ಕಾಲೇಜು ತುಮಕೂರು

ಆತ್ಮೀಯ ಶರಣ ಬಂಧು,

ಶ್ರೀ ಮಠದಲ್ಲಿ ಜಾತ್ರಾಮಹೋತ್ಸವ ಮಹಾಶಿವರಾತ್ರಿ ಸಂದರ್ಭದಲ್ಲಿ ಜರುಗುತ್ತ ಬಂದಿದೆ. 1902 ನೆ ವರ್ಷದಿಂದಲೂ ಪೂಜ್ಯ ಶಿವಯೋಗಿಗಳಾದ ಉದ್ದಾನ ಸ್ವಾಮಿಗಳವರ ಉದಾತ್ತ ದೃಷ್ಟಿ ನೂರು ರೂಪವಾಗಿ ಇಂದು ಅರಳಿದೆ. ಉದ್ದಾನಸ್ವಾಮಿಗಳವರ ಅನುಭಾವಸಿದ್ಧಿಯೇ ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರಸ್ವಾಮಿಗಳು. ತಮ್ಮ ಗುರುಗಳಿಂದ ಪ್ರಾರಂಭವಾದ ಸೇವಾಕಾರ್ಯಗಳನ್ನೆಲ್ಲ ಸಹಸ್ರಪಟ್ಟು ವಿಸ್ತರಿಸುತ್ತ ಬಂದಿದ್ದಾರೆ. ಶ್ರೀ ಶ್ರೀ ಗಳು. ಇಂದು ಜಾತ್ರೆ ಕೇವಲ ಜನ ಜಾನುವಾರುಗಳ ಜಂಗುಳಿಯಾಗಿ ಸಮಾವೇಶ ಗೊಳ್ಳುತ್ತಿಲ್ಲ. ಅನೌಪಚಾರಿಕ ಶಿಕ್ಷಣ ಶಾಲೆಯಾಗಿ, ಪ್ರಯೋಗಿಕತಾಣವಾಗಿ ಬೆಳೆಯುತ್ತಿದೆ. ಶ್ರೀ ಸಿದ್ಧಲಿಂಗೇಶ್ವರ ವ್ಯವಸಾಯ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ರೂಪದಲ್ಲಿ ಆವಿಷ್ಕಾರ ಪಡೆದಿದೆ. ಲಕ್ಷಲಕ್ಷ ಜನ ಗ್ರಾಮೀಣ ಬಂಧುಗಳು ವಸ್ತುಪ್ರದರ್ಶನಕ್ಕೆ ಭೇಟಿಯಿತ್ತು ಫಲಾನುಭವಿಗಳಾಗುತ್ತಿದ್ದಾರೆ. ಅದರ ಅಂಗವಾಗಿ ಸಾಂಸ್ಕೃತಿಕ ಕ್ಯಾರ್ಯಕ್ರಮಗಳು ಮೂಡಿಬರುತ್ತಿವೆ. ಮಹಾ ಶಿವರಾತ್ರಿ ಜಾಗರಣೆ ಪ್ರಯುಕ್ತ 'ಜಗಜ್ಯೋತಿ ಬಸವೇಶ್ವರ' ನಾಟಕ ಈ ಭಾರಿ 6.3.89 ರಂದು ಜರುಗಿದಾಗ ಇಡೀ ವಸ್ತುಪ್ರದರ್ಶನಕ್ಕೆ ಹೋಲಿಸಿದಾಗ ಭೇಟಿಕೊಟ್ಟವರ ಸಂಖ್ಯೆ ಹೆಚ್ಚು ಎಂಬುದು ದಾಖಲೆಗಳಿಂದ ತಿಳಿಯಿತು. 215 ನೆ ಪ್ರಯೋಗವಾದ ಅಂದಿನ ನಾಟಕ ಸುಂದರವಾಗಿ ಪ್ರದರ್ಶನವಾದಾಗ ನಗರದ ಗ್ರಾಮೀಣ ಪ್ರದೇಶದ ಆಸ್ತಿಕ ಬಂಧು ಭಗಿನಿಯರು ಸಂತೋಷಿದರು. ನಾಟಕ ಮುಗಿದಾಗ ತರಿದಾಳಿಸಿಂದ ಬಂದಿದ್ದ ತಾಯಿ ಯೊಬ್ಬರು "**ಬಸವಣ್ಣನಂಥ ಪುಣ್ಯಾತ್ಮರು ಸಿದ್ಧಗಂಗೆಯಲ್ಲಿಂದು ನಮ್ಮ ಕಣ್ಮುಂದೆ ಇರುವುದರಿಂದ ಇಂಥದನೆಲ್ಲ ನೋಡುವ ಭಾಗ್ಯ ನಮ್ಮದಾಗಿದೆ**" ಎಂದು ನುಡಿದರು. ಸ್ವಾಮಿಗಳು ಮಾಡುತ್ತಿರುವ ಸೇವೆಗೆ ಇದಕ್ಕಿಂತ ದೊಡ್ಡ ಕೃತಜ್ಞತೆ ಯಾವುದಿದೆ ಎನುತ್ತೀಯಲ್ಲವೇ ?

ದಿನಾಂಕ 26.3.89 ರಂದು ಹಾಸನ ಜಿಲ್ಲೆ ಅರಕಲಗೊಡು ತಾಲ್ಲೂಕು ಕೇರಳಾಪುರ ಗ್ರಾಮದಲ್ಲಿ 216 ನೆಯ ಪ್ರಯೋಗವಾಗಿ ಬಸವ ಜಯಂತಿ ನಡೆಯಿತು. ಸುತ್ತೂರು ಶ್ರೀ ಶ್ರೀಗಳವರು ಆಶೀರ್ವಚನ ನೀಡುತ್ತ ಪರಮ ಪೂಜ್ಯ ಮಹಾಸ್ವಾಮಿಗಳವರು ಮಾಡುತ್ತಿರುವ ಬಸವಜಯಂತಿ ಕಾರ್ಯಕ್ರಮ ದಿಂದ ಜನಜಾಗೃತರಾಗಬೇಕು,



ಸಮಾಜ ಸಂಘಟಿತವಾಗಬೇಕು ಎಂದರು. ಸಮಾರಂಭದಲ್ಲಿ ಶರಣ ಹೆಚ್. ಗಂಗಾಧರನ್ ಮತ್ತು ಶರಣ ವಿದ್ವಾನ್ ಶಿವಕುಮಾರ್ ರವರು ಬಸವಣ್ಣನವರ ಜೀವನದ ಸೇವಾ ಮುಖಗಳನ್ನು ಪರಿಚಯಿಸಿದರು. ಶರಣ ಹೆಚ್. ವಿ ವೀರಭದ್ರಯ್ಯ ಬಸವಣ್ಣನವರು ಮತ್ತು ಜನಪದರು ಎಂಬ ವಿಷಯವನ್ನು ಸೂಚ್ಯವಾಗಿ ವಿವರಿಸಿದರು. ಅಧ್ಯಕ್ಷ ಪೀಠದಿಂದ ಆಶೀರ್ವಚನನೀಡುತ್ತ ಪರಮ ಪೂಜ್ಯರು ಕಾಯಕ ಜೀವಿಗಳಾಗಿ ಕರ್ತವ್ಯಮುಖಿಗಳಾಗದೇ ಹೋದರೆ ರಾಷ್ಟ್ರಕ್ಕೆ ಭವಿಷ್ಯವೆಲ್ಲಿಯದು. ಬಸವಸಿದ್ಧಾಂತ ಅರ್ಥಪೂರ್ಣವಾದುದು, ಜೀವನ ವಿಮುಖವಾದುದಲ್ಲ. ಜೀವನವನ್ನು ಪ್ರೀತಿಯಿಂದ ಗೌರವಿಸಿ ಅದಕ್ಕೆ ಮೌಲ್ಯವನ್ನು ತಂದುಕೊಟ್ಟಂತದ್ದು ಎಂದು ನುಡಿದರು.

ರಾತ್ರಿ 10 ಘಂಟೆಗೆ ನಾಟಕ ಪ್ರಾರಂಭವಾದಾಗ ಸೇರಿದ್ದ ಜನತೆಯನ್ನು ನೋಡಿ ವಿಸ್ಮಯವಾಯಿತು. ನಾಟಕ ಮುಗಿದಾಗ ಕೇಳಿ ಬಂದ ಮಾತೆಂದರೆ "ಗಲಭೆಯಿಲ್ಲದೆ ನಡೆದ ನಾಟಕವೆಂದರೆ ಇದೊಂದೆ" ಎಂಬುದಾಗಿ. ಜನತೆಯಿತ್ತ ಸಹಕಾರ ದೊಡ್ಡದು. ಬಸವಣ್ಣನವರ ನಾಟಕವನ್ನು ನೋಡುತ್ತಾ ಹೋದಂತೆ ಮೂಕವಿಸ್ಮಿತರಾಗುತ್ತ ಹೋದರು. ಸ್ವಯಂ ಸಂಗೀತ ವಿದ್ವಾಂಸರೊಬ್ಬರು ಬಸವಣ್ಣನವರನ್ನು ಕಾಣಬಂದ ಅಂಥ ಶರಣರೊಬ್ಬ ಹಾಡಿದುದನ್ನು ಕೇಳಿ ಅನುಭವಿಸಿ, ಆನಂದಿಸುತ್ತ 'ಸಾಕು ಮಹಾನುಭಾವ ಇದೊಂದು ವಚನ ಸಾಕು ಜನ್ಮ ಪುನೀತವಾಯಿತ್ತು ಎಂದು ಉದ್ಗರಿಸಿದರು.

ಸುಖವೊಂದು ಕೋಟಿ ಬಂದಲ್ಲಿ ಬಸವಣ್ಣನ ನೆನೆವುದು. ದುಃಖವೊಂದು ಕೋಟಿ ಬಂದಲ್ಲಿ ಬಸವಣ್ಣನ ನೆನೆವುದು ಎನ್ನುತ್ತದೆ ಶರಣವಾಣಿ. ದಿನಾಂಕ 3-4-1989 ರಂದು ಕೊಡ್ಲಿಪೇಟೆ- ಕಲ್ಮಠದಲ್ಲಿ ಬಸವ ಜಯಂತಿ ಆಚರಣೆ. 217 ನೆಯದಾಗಿ ಬೆಳಗಿನಿಂದ ಸಂಜೆಯವರೆಗೆ ನಡೆದ ಶಿವಾನುಭವ ಗೋಷ್ಠಿಗಳು ವಿಚಾರಪೂರ್ಣವಾಗಿ ಬಂದವು. ರಾತ್ರಿ ನಾಟಕ 9-30 ಕ್ಕೆ ಪ್ರಾರಂಭವಾಯಿತು. ಸುಮಾರು ಎಂಟು ಸಾವಿರ ಪ್ರೇಕ್ಷಕರು. ಸುತ್ತಮುತ್ತ ಬರೀ ಕಾಡು. ಮಠದ ಮನೆಯೊಂದೇ ಜನವಸತಿಗಾಗಿ ಇರುವ ಆಶ್ರಯಸ್ಥಾನ. ನಾಟಕ ಎರಡು ದೃಶ್ಯಗಳು ಮುಗಿದು ಮೂರನೆಯ ದೃಶ್ಯ ಆರಂಭವಾಗಬೇಕು. ಇದ್ದಕ್ಕಿದ್ದಂತೆ ಎಲ್ಲಿಲ್ಲದ ಬಿರುಗಾಳಿ, ಮಳೆ ಪ್ರಾರಂಭವಾಯಿತು. ಎಲ್ಲ ಅಸ್ತವ್ಯಸ್ತ ಗಲಭೆ, ಗದ್ದಲ, ಪ್ರಕೃತಿಯ ವಿಕೋಪಕ್ಕೆ ಹೆದರಿದ ಪ್ರೇಕ್ಷಕರ ಗಾಬರಿ, ಗಡಿ ಬಿಡಿ, ಪರಿಣಾಮವಾಗಿ ಅಮಾಯಕರ ಸಾವು ನೋವು. ಕಾಲದ್ದಕ್ಕೆಂಬಂತೆ ವಿದ್ಯುತ್ತಿನ ಸಿಲುಗಡೆ. ಕತ್ತಲೆಯಲ್ಲಿ ನಡೆದ ದುರ್ಘಟನೆಯಿಂದಾಗಿ ಸಾವನ್ನಪ್ಪಿದವರು ಏಳು ಮಂದಿ ಘಟನೆ ನಡೆದಾಗ ಪರಮ ಪೂಜ್ಯರು ಪಕ್ಕದ ಶನಿವಾರ ಸಂತೆಯ ಭಕ್ತರ ಮನೆಗೆ ಬಿನ್ನಹದ ಮೇರೆಗೆ ದಯಮಾಡಿಸಿದ್ದರು. ಹತ್ತು ಘಂಟೆಯ ವೇಳೆಗೆ ರಂಗದ ಬಳಿ ಬಂದಾಗ ಶ್ರೀ ಶ್ರೀಗಳಿಗಾದ ನೋವು ಅಪಾರ ಮಾತಿಲ್ಲದೆ ಸುಮ್ಮನೆ ಕುಳಿತು ಕೆಲ ನಿಮಿಷಗಳ ನಂತರ ಜನರೆಲ್ಲರನ್ನೂ ಸುರಕ್ಷಿತವಾದ ಸ್ಥಳಕ್ಕೆ ತೆರಳುವಂತೆ ಲಾರಿ, ಮೋಟರ್‌ಗಳನ್ನು ವ್ಯವಸ್ಥೆ ಮಾಡಿದರು. ಆಸ್ಪತ್ರೆಗೆ ನೋವಿಗೊಳಗಾದವರನ್ನ ಸೇರಿಸುವ ಏರ್ಪಾಡು

ಮಾಡಿದರು. ಅನಂತರವೇ ಕಲಾವಿದರ ಬಸ್ಸನ್ನು ಹಿಂದಿರುಗುವಂತೆ ಸೂಚಿಸಿದರು. ಮರುದಿನ ಪತ್ರಿಕೆಗಳಲ್ಲಿ ಬಂದ ದುರಂತದ ವಿವರಗಳಲ್ಲಿ ' ಸ್ವಾಮೀಜಿ ಆಶ್ಚರ್ಯಕರವಾದ ರೀತಿಯಲ್ಲಿ ಅಪಾಯದಿಂದ ಪಾರಾದರು " ಎಂಬುದನ್ನು ಕಂಡು ವಿಸ್ಮಯವಾಯಿತು. ಸುಖ ದುಃಖಗಳೆರಡೂ ಬಸವಣ್ಣನ ಪ್ರಸಾದವೆಂದೇ ತಿಳಿಯಬೇಕಲ್ಲವೆ?

ಹೊಳೆನರಸೀಪುರ ತಾ॥ ಟ ಮಾಯಗೊಂಡನಹಳ್ಳಿಯಲ್ಲಿ ದಿನಾಂಕ 15-4-89 ಬಸವ ಜಯಂತಿ-218 ನಡೆದಾಗ ನಾವು ಕಂಡ ಜನಸ್ತೋಮ ಅದ್ಭುತವಾದುದು, ಸುಮಾರು 25 ಸಹಸ್ರ ಜನ ಸಮಾವೇಶಗೊಂಡಿದ್ದರು. ಮಾಯಗೊಂಡನಹಳ್ಳಿ ಶ್ರೀ ಮಠದ ಪೂಜ್ಯ ಸ್ವಾಮಿಗಳ ನೇತೃತ್ವದಲ್ಲಿ ನಡೆದ ಅಂದಿನ ಸಮಾರಂಭ ವೈಭವಪೂರ್ಣವಾಗಿತ್ತು. ನಾಟಕ ನೋಡಲು ಬಂದಿದ್ದ ಜನ ಕತ್ತಾಳೆಯ ಬೇಲಿಯ ಮೇಲೆ ಕಂಬಳಿ ಹಾಕಿ ಕುಳಿತು ನೋಡಿದರು. ಅಷ್ಟು ಜನ! ನಾಟಕ ಮುಗಿದಾಗ ಶ್ರೀ ಶ್ರೀ ಗಳವರ ಕಾರು ಮುಂದೆ ಚಲಿಸಬೇಕಾದರೆ ತಾಸು ಸಮಯ ಹಿಡಿಯಿತು. ಆತಿಥ್ಯವಂತೂ ಸ್ಮರಣೀಯವಾಗಿತ್ತು.

ಶರಣ ಬಂಧು, ಗದಗದ ಶ್ರೀ ತೋಂಟದಾರ್ಯ ಸಂಸ್ಥಾನ ಮಠದ ಹೆಸರನ್ನು ನೀನು ಬಲ್ಲೆಯಷ್ಟೆ. ಅಲ್ಲಿನ ಪೂಜ್ಯ ಶ್ರೀ ಶ್ರೀ ಜಗದ್ಗುರು ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಅದ್ಭುತ ಕ್ರಿಯಾಶೀಲ ಮೂರ್ತಿಗಳು. ಶರಣಸಾಹಿತ್ಯ ಪ್ರಕಟಣೆ ಜಗತಿನಲ್ಲಿ ಹೊಸಯುಗವನ್ನೇ ಆರಂಭಿಸಿದ್ದಾರೆ. ದಿ. 19 4. 89 ರಂದು ಅಲ್ಲಿನ ಶ್ರೀ ಮಠದಲ್ಲಿ ಜಾತ್ರಾ ವಿಶೇಷ ಸಂದರ್ಭ. ಅಂಥ ಶುಭಾವಸರದಲ್ಲಿ ಬಸವ ಜಯಂತಿ ಆಚರಣೆ-219. ಕರ್ನಾಟಕ ವಿಶ್ವವಿದ್ಯಾಲಯದ ಡಾ॥ ಬಿ, ವಿ. ಮಲ್ಲಾಪುರ, ನ್ಯಾಯಮೂರ್ತಿಗಳಾದ ಮಳೀಮಠರಿಂದ ಉಪನ್ಯಾಸ ಗ್ರಂಥ ಬಿಡುಗಡೆ. ಪೂಜ್ಯ ಶ್ರೀ ಶ್ರೀ ಜಗದ್ಗುರು ಸಿದ್ಧಲಿಂಗ ಮಹಾಸ್ವಾಮಿಗಳು ಮಾತನಾಡುತ್ತ- ಸಿದ್ಧಗಂಗಾ ಮಠದ ಪರಮಪೂಜ್ಯ ಶ್ರೀ ಶ್ರೀ ಗಳವರು ನಡೆಸಿರುವ ಮಹಾ ದಾಸೋಹ ಹಾಗೂ ಶೈಕ್ಷಣಿಕ ಸೇವೆಯನ್ನು ಕಂಡಮೇಲೆ ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣದಲ್ಲಿ ಬಸವಣ್ಣನವರು ನಡೆಸಿದ ದಾಸೋಹ ಯಥಾರ್ಥವಾಗಿದ್ದಿರಬೇಕು ಎಂಬ ದೃಢನಂಬಿಕೆಯುಂಟಾಗುತ್ತದೆ ಎಂದು ಶ್ಲಾಘಿಸಿದರು. ಪರಮಪೂಜ್ಯರು ಅಧ್ಯಕ್ಷ ಪೀಠದಿಂದ ಮಾತನಾಡುತ್ತ ರಿಕ್ತಾವಸ್ಥೆಯಲ್ಲಿದ್ದ ಗದಗಿನ ಶ್ರೀ ಮಠಕ್ಕೆ ಮಹಾಸ್ವಾಮಿಗಳು ಲಭ್ಯವಾದದು ಸಮಾಜದ ಬಹುದೊಡ್ಡ ಭಾಗ್ಯವೆಂದು ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತ, ಇಂದಿನ ಸಮಾಜಕ್ಕೆ ಬಸವಣ್ಣನವರೊಬ್ಬರೆ ದಾರಿದೀಪ, ಪರಿಹಾರ ಎಂದು ನುಡಿದರು.

ಬಸವೇಶ್ವರನಾಟಕ ನೋಡಿದ ಗದುಗಿನ ಬಂಧುಗಳು ಬಹುಮಾನಗಳನ್ನಿತ್ತರು. ಮೆಚ್ಚುಗೆಯನ್ನು ವ್ಯಕ್ತಪಡಿಸಿದರು, ಹುಬ್ಬಳಿಯವರಾದ ನಿವೃತ್ತ ಪೋಲೀಸ್ ಅಧಿಕಾರಿಗಳಾದ ಶರಣಬಂಧು ಶ್ರೀ ಸಣ್ಣಮುನಿಯವರು "ನಾವು ಹುಬ್ಬಳ್ಳಿಯಲ್ಲಿ ಈ ನಾಟಕ ಆಡಿಸುತ್ತೇವೆ" ಎಂದು ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು.



ಗದಗದಿಂದ ಬೆಂಗಳೂರು ಜಿಲ್ಲೆ ರಾಮನಗರ ತಾಲ್ಲೂಕು ದೊಡ್ಡಗಂಗವಾಡಿಗೆ ಬಸವಯಾತ್ರೆ ನಡೆಯಿತು. ದಿ. 22. 4. 89 ರಂದು 250 ನೇ (ಪ್ರಯೋಗ) ಪವಾಡ ಸದೃಶವೆಂಬತೆ ನಡೆಯಿತು. ಕರ್ನಾಟಕದ ಮಂತ್ರಿಮಂಡಲ ವಿಸರ್ಜಿತವಾದ ಮರುದಿನವದು ಜನರೆಲ್ಲ ಬಸವಣ್ಣನಂಥ ಮಂತ್ರಿಗಳೆಂದು ಬಂದಾರು ಎಂದೇ ಮಾತನಾಡುತ್ತಿದ್ದ ದೃಶ್ಯ ಒಂದೂವರೆ ಕಿಲೋಮೀಟರ್ ಉತ್ಸವದೃಶ್ಯ. ಇನ್ನೂರ ಇಪ್ಪತ್ತೊಂದು ಕಲಶಗಳು, ಅಷ್ಟೇ ಆರತಿ, ಇಪ್ಪತ್ತೊಂದು ಗಾಡಿಗಳು, ಮಂಗಳವಾದ್ಯಗಳ ಮೂರುತಂಡ, ಗ್ರಾಮೀಣ ಬಸವಬಂಧುಗಳ ಉತ್ಸಾಹದ ಮೆರೆತ ಶ್ರೀ ಗೊ. ರು. ಚೆನ್ನಬಸಪ್ಪನವರು ಮತ್ತು ಬೇವೂರು ಪೂಜ್ಯ ಶ್ರೀ ಶ್ರೀ ಗಳವರ ಉಪನ್ಯಾಸ ಪರಮಪೂಜ್ಯರ ಆಶೀರ್ವಚನ ಜಿಗುಪ್ಸಿತವಾಗಿರುವ ಇಂದಿನ ವಾತಾವರಣದಲ್ಲಿ ಬಸವತತ್ವಗಳಿಂದ ಉದ್ಧಾರವಾಗುವುದೊಂದೇ ನಮಗಿರುವಮಾರ್ಗ ಎಂದರು ಶ್ರೀ ಶ್ರೀ ಗಳು. ನಾಟಕ ಆರಂಭವಾದಾಗ ಸಣ್ಣಗೆಮಳೆ. ಸಂಗೀತ ಮಾಸ್ಟರ್ ಶ್ರೀ ವೆಂಕಟರಾಮಯ್ಯನವರು ಪೂಜ್ಯ ಶ್ರೀ ಶ್ರೀ ಗಳವರ ಸಂಕಲ್ಪಕ್ಕೆ ಚ್ಯುತಿ ಬರುವುದಿಲ್ಲ ನಾಟಕ ಮುಂದುವರಿಸೋಣವೆಂದರು. ನಾಟಕ ಮುಂದೆ ನಡೆಯಿತು ಮಳೆ ಹಸಿದ್ದಿತ್ತು ಜನಕುಳಿತ್ತಿತ್ತು. ರಾತ್ರಿ ಒಂದು ಘಂಟೆ ಸಂಪೂರ್ಣ ಮಳೆ ನಿಂತಿತು. ಪಕ್ಕದ ಅರ್ಚಕರ ಹಳ್ಳಿಯ ಬಂಧುಗಳೊಬ್ಬರು 'ಸತ್ಯವಾಗಿಯೂ ಇದು ಪವಾಡವೇ ಸ್ವಾಮಿ ಎಂದರು. ಬಸವ ದರ್ಶನಕ್ಕೊಳಗಾದ ಪುಣ್ಯ ಚೇತನಗಳಿಗೆ ಪ್ರಿಯಾಜ್ಞಾನಬೆಸೆದ ತ್ಯಾಗಮೂರ್ತಿಗಳಿಗೆ ತಿಳಿಯದ್ದು ಯಾವುದು ಎಂದರು ಸಂಗೀತ ಮಾಸ್ಟರು.

ಗುಬ್ಬಿ ತಾಲ್ಲೂಕು ಕಲ್ಲೂರು ಗ್ರಾಮದ ಶರಣ ಬಂಧು ಶ್ರೀ ಚಿಕ್ಕಸಿದ್ದಯ್ಯನವರ ನಿಷ್ಠೆ ಅಚಲವಾದುದು; ಧೈರ್ಯ ಅಖಂಡವಾದುದು, ಸಂಘಟನೆ ಸ್ಮರಣೀಯವಾದುದು. ದಿನಾಂಕ 27-4-89 ರಂದು 22 ನೆಯ ಪ್ರಯೋಗವಾಗಿ ತಮ್ಮೂರಿನಲ್ಲಿ ನಲ್ಲೂರಿನಲ್ಲಿ ಗ್ರಾಮೀಣ ಬಂಧುಗಳ ಸಹಕಾರದೊಂದಿಗೆ ಬಸವ ಜಯಂತಿ ಆಚರಿಸಿದರು. ಬಸವಣ್ಣನವರ ಹಾಗೂ ಆಂಜನೇಯನ ದೇವಾಲಯಗಳನ್ನು ಪ್ರಾರಂಭಿಸಿದರು. ಗ್ರಾಮ ಸಮುದಾಯದ ಒಗ್ಗಟ್ಟಿನ ಸಂಕೇತಗಳಾದುವು. ಪವಿತ್ರ ಮಂದಿರಗಳು ಸಮಾರಂಭದಲ್ಲಿ ಉಪನ್ಯಾಸ ಮಾಡುತ್ತ ಮಾಜಿ ಶಾಸಕರಾದ ಶ್ರೀ ಸಿ. ಎನ್. ಭಾಸ್ಕರಪ್ಪನವರು ಪರಮ ಪೂಜ್ಯ ಶ್ರೀ ಶ್ರೀ ಗಳವರು ನೀಡಿರುವ ಆದರ್ಶ ದೊಡ್ಡದು. ಜೀವಂತ ಬಸವೇಶ್ವರರು. ಅವರನ್ನು ತಪ್ಪಾಗಿ ತಿಳಿದವರು ಇಂದು ಪಶ್ಚಾತ್ತಾಪ ಪಡುತ್ತಿದ್ದಾರೆ ಶುದ್ಧ ಅಪರಂಜಿಯಾಗಿದ್ದಾರೆ ಶ್ರೀ ಶ್ರೀಗಳು ಎಂಬುದಾಗಿ ನಮನಗಳನ್ನರ್ಪಿಸಿದರು.

ಬಸವ ತತ್ವಗಳು ಸಾರ್ವಕಾಲಿಕ, ಸಾರ್ವತ್ರಿಕ, ಅಂಥ ತತ್ವಗಳ ಪ್ರಸಾರ ಮಣಿಹದಲ್ಲಿ ತೊಡಗಿರುವ ಪರಮ ಪೂಜ್ಯ ಶ್ರೀ ಶ್ರೀಗಳವರು ಹೊಗಳಿಕೆ ತೆಗಳಿಕೆ

ಗಳಿಂದ ದೂರ ಸರಿದವರು. ಸೇವಾ ಜೀವನಕ್ಕೆ ಅರ್ಥಪೂರ್ಣ ಸಂಜೀವಿನಿಯಾಗಿ ಮುನ್ನಡೆದಿರುವವರು ಎಂದರು ಮಾಜಿ ಸಚಿವ ಸಾಗರನಹಳ್ಳಿ ಶ್ರೀ ರೇವಣ್ಣನವರು.

ಭಕ್ತಿಗೆ ಜ್ಞಾನ, ಐಶ್ವರ್ಯ, ಅಧಿಕಾರ ಬೇಕಾಗಿಲ್ಲ. ಬೇಕಾದುದು ಶುದ್ಧ ಅಂತರಂಗ. ಮನಸ್ಸು ಅದ್ಭುತವಾದುದು. ಮನುಷ್ಯನ ಬಂಧನ-ವಿಮೋಚನೆಗೆ ಅದೇ ಕಾರಣ. ಮನಸ್ಸನ್ನು ಶಿವ ಸಂಕಲ್ಪಯುತವಾಗಿ ಮಾಡುವುದೇ ಜಯಂತಿ ಆಚರಣೆಯ ಅರ್ಥ ಎಂದರು ವಿದ್ವಾನ್ ಕೆ.ಎಂ. ರೇವಣ್ಣ ಸಿದ್ದಯ್ಯನವರು.

ಶರಣೆ ಗಂಗಾಂಬಿಕೆಯಂಥ ಅನುಕೂಲ ಕರೆಯಾದ ಪತ್ನಿಯ ಸಹಕಾರ ಸಹ ವಾಸಗಳು ಲಭ್ಯವಾದುದರಿಂದ ಬಸವಣ್ಣನವರ ವ್ಯಕ್ತಿತ್ವ ಅರಳಲು ಕಾರಣವಾಯಿತು ಎಂದರು ಶರಣೆ ಸೋದರಿ ಶ್ರೀಮತಿ ಅಮೃತ ವೀರಭದ್ರಯ್ಯನವರು. ದೊಡ್ಡ ಸಾರಂಗಿ ಶರಣ ಬಂಧು ಶ್ರೀಮೃತ್ಯುಂಜಯಪ್ಪನವರು ಮಾತನಾಡುತ್ತ ಶಿವ ಕೊಟ್ಟ ಶರಣ ಜನ್ಮವನ್ನು ಸದುಪಯೋಗ ಮಾಡಿಕೊಳ್ಳಬೇಕೆಂದರು ಶ್ರೀ ಹೆಚ್. ವಿ. ವೀರ. ಭದ್ರಯ್ಯನವರು. ಜನಪದದ ಜಾಗೃತಿಗಾಗಿ ಬಸವಣ್ಣ ಜಗತ್ತಿಗೆ ಬಂದರು. ಅವರನ್ನು ಅರ್ಥ ಮಾಡಿಕೊಳ್ಳುವಾಗ ಜನಪದದ ಹಾಡುಗಳನ್ನೇ ನೋಡಬೇಕೆಂದರು.

ಪರಮ ಪೂಜ್ಯ ಶ್ರೀ ಶ್ರೀ ಗಳವರು ಪವಾಡ ಪುರುಷರಿಂದು ಬೇಕಾಗಿಲ, ಪವಾಡ ಪುರುಷ ಬಸವಣ್ಣನಿಗಿಂತ, ಮನುಕುಲದ ಸುಧಾರಕ ಬಸವಣ್ಣ ನಮಗೆ ಬೇಕಾಗಿದ್ದಾರೆ. ದಯವೇ ಧರ್ಮದ ಮೂಲವೆಂಬುದನ್ನು ಆಚರಿಸಿ ತೋರಿಸಿದ ಬಸವಣ್ಣನವರ ವ್ಯಕ್ತಿತ್ವ, ಸಂದೇಶ, ಸಾರ್ವಕಾಲಿಕವಾಗಿವೆ ನ್ಯಾಯವಾದಗಳಿಕೆ, ಧರ್ಮ, ನೀತಿ, ತತ್ವ ಇಂದು ಅಗತ್ಯವಾಗಿದೆ. ದುಡಿಮೆ ದೇವರಾಗಬೇಕಿಂದು. ತತ್ವನಿಷ್ಠ ಜನಾಂಗರೂಪಿತವಾಗ ಬೇಕು. ಬಸವಣ್ಣ ಸೃಷ್ಟಿಸಿದ್ದು, ರೂಪಿಸಿದ್ದು, ನ್ಯಾಯನಿಷ್ಠುರಿ ತತ್ವನಿಷ್ಠ ಸಮಾಜ ವನ್ನು ಕಾಯಕ ಪೂರ್ಣಜನಾಂಗವನ್ನು ಕಾಯಕ ಜೀವಿ ವ್ಯರ್ಥ ಕಾಲಹರಣ ಮಾಡು ವುದಿಲ್ಲ. ಕ್ರಿಯಾಶೀಲನಾಗಿ, ಸಾರ್ಥಕ ಜೀವನನಡೆಸುತ್ತಾನೆ. ಅತ್ತ ಜನತೆಯ ಗಮನ ಸೆಳೆಯುವುದಕ್ಕಾಗಿ ಗ್ರಾಮಾಂತರ ಬಸವ ಜಯಂತಿನಡೆದಿದೆ ಎಂಬುದಾಗಿ – ಆಶೀರ್ವಚನ ನೀಡಿದರು.

ರಾತ್ರಿ ಹತ್ತುಘಂಟೆಗೆ ನಾಟಕ ಆರಂಭವಾಯಿತು. ಚಿಕ್ಕಸಿದ್ದಯ್ಯನವರ ಆತಿ ಥ್ಯದಿಂದ ಸುಪ್ರೀತರಾದ ನಾಟಕದ ಬಂಧುಗಳು ಯಶಸ್ವೀ ಪ್ರಯೋಗ ನೀಡಿದರು. ನಾಟಕ ಮುಗಿದಾಗ ಸೂಲದಯ್ಯನ ಪಾಳ್ಯದ ಶರಣ ಬಂಧು ನಂಜಪ್ಪ ಹನಿತುಂಬಿದ ಕಣ್ಣುಗಳಿಂದ "ಇಂಥಾ ಮಹಾನುಭವರ ಸೇವೆಯನ್ನು ಅರ್ಥಮಾಡಿಕೊಳ್ಳಲಾರದ ಜನ ನಾವೆಂಥ ದೌರ್ಭಾಗ್ಯಶಾಲಿಗಳು" ಎಂದ ವರದಿಗಾರನೊಂದಿಗೆ ತಮ್ಮ ಅಳ ಲನ್ನು ತೋಡಿಕೊಂಡರು.

